॥ ಶ್ರೀ ॥

ಮಲ್ಲಿಕಾರ್ಜುನ ಪ್ರಸೀದತು.



ಸಂಪೂರ್ಣ

# ಹೇಮರಡ್ಡಿ ಮಲ್ಲಮ್ಮ

ನಾ ಟ ಕ.



ಂಥಕರ್ತರು:
ಧುರೀಣ, ಸದ್ಭಕ್ತ ಶಿರೋಮಣಿ,
ಕೆ. ಬಿ. ಕೊಟ್ಟೂರು ಬಸವಪ್ಪನವರು.



ರಡನೆ ಆವೃತ್ತಿ ಪ್ರತಿಗಳು ೧೦೦೦.

ಬೆಲೆ ೧೨ ಆಣೆ



ಕೆ. ಬಿ. ಕೊಟ್ಟೂರ ಬಸವಪ್ಪನವರು.

— ಸಂಪೂರ್ಣ —

# ಹೇಮರಡ್ಡಿ ಮಲ್ಲಮ್ಮ

## ನಾ ಟ ಕ.

— ಇದು —

ಶಿವಶರಣ ಸೇವಾಧುರೀಣ, ಸದ್ಭಕ್ತ ಶಿರೋಮಣಿ,
ದಾವಣಗೇರಿ ಶ್ರೀ ಜಯಲಕ್ಷ್ಮಿಪ್ರಸಾದಿಕ
ಸಂಗೀತ ನಾಟಕ ಮಂಡಲಿಯ,
ಒಡೆಯರಾದ
ಕೆ. ಬಿ. ಕೊಟ್ಟೂರ ಬಸವಪ್ಪನವರಿಂದ ರಚಿಸಲ್ಪಟ್ಟು,
ಪ್ರಕಾಶಗೊಳಿಸಲ್ಪಟ್ಟಿತು.

೧೯೩೫ ಇಸ್ವಿ.

ಕ್ರಯ ೧೨ ಆಣೆ.

# ಸುವರ್ಣ ಪದಕಗಳನ್ನು ಮಾನಪತ್ರಗಳನ್ನು ಪದವಿಗಳನ್ನು ಕೊಟ್ಟ ಮಹಾಶಯರ ಹೆಸರುಗಳು.

## ಹೊಸರಿತ್ತಿ ತಾಲೂಕ ಕರ್ಜಗಿ ಜಿಲ್ಲಾ ಧಾರವಾಡ.

ತಾರೀಖು ೨೦—೧—೧೯೩೧ ಶ್ರೀ ಗುದ್ದಿಸ್ವಾಮಿಗಳು
„ „ „ „ ಕಲ್ಯಾಣಪ್ಪಾ ಹಳ್ಳೀಕೇರಿ
„ „ „ „ ಚಿನ್ನಪ್ಪಯ್ಯನವರು ಹಿರೇಮಠ
„ „ „ „ ವೀರಪ್ಪನವರು ಪರಂಗಿ



## ದಾವಣಗೇರಿ ಮೈಸೂರ ಸ್ಟೇಟ್



ತಾರೀಖು ೧೫—೧೦—೧೯೩೧ ಶ್ರೀ ತಿರುಕಪ್ಪನಮಠದ ರುದ್ರಪ್ಪಯ್ಯನವರು
„ „ „ „ ಹಿರೇಮಠದ ಷಡಕ್ಷರಿಯಪ್ಪನವರು
„ „ „ „ ಮಠದ ಅನ್ನದಾನಪ್ಪಯ್ಯನವರು
„ „ „ „ ಬಾಗಿಲಮನಿ ಷಡ್ಕಪ್ಪನವರು
„ „ „ „ ಹುವ್ವಿನಹಡಗಲಿ ತಾ|| ಬೋ|| ಪ್ರೆಸಿಡೆಂಟ
„ „ „ „ ಕರಿಯತ್ತಿನ ಶಾಂತಪ್ಪನವರು
„ „ „ „ ಶಿಂಗ್ಟಾಲೂರ ಪಂಚಕಮೊಟ ಪ್ರೆಸಿಡೆಂಟರು
„ „ „ „ ಹವ್ವಿಗಿ ಶಾಂತಪ್ಪನವರು
„ „ „ „ ಹಿರೇಕೆರೂರ ಶ್ರೀಮಂತ ದೊಡ್ಡ ಅಡಿವೆಪ್ಪನ
„ „ „ „ ಶಿವಲಿಂಗಪ್ಪ ಕುಬುಸದ

## ರಾಂಪುರ ತಾ|| ಹೊನ್ನಾಳಿ ಡಿಸ್ಟ್ರಿಕ್ಟ ಶಿವಮೊಗ್ಗ.

ತಾರೀಖು ೭—೩—೧೯೩೨ ಶ್ರೀ ಸದ್ಗುರು ಹಾಲಸ್ವಾಮಿಗಳು
" " " " ಎಚ್. ಎಸ್. ಹಲಗಿಲಿ
" " " " ಹಾಲಸ್ವಾ ಬಸನಗೌಡಾ ಸಾಸ್ವಿಹಳ್ಳಿ ಸಾಡಿಗರು

## ಹಾವೇರಿ ಜಿಲ್ಹಾ ಧಾರವಾಡ.

ತಾರೀಖು ೧೦—೬—೧೯೩೨ ಫಕೀರಪ್ಪಯ್ಯನವರು ಕರಸ್ಥಲ
" " " " ಬಿ.ಎ.ಬಿ.ಎಲ್. ವಕೀಲ. ಶಿವಮೂರ್ತೆಪ್ಪಯ್ಯನವರು ಹಿರೇಮಠ

## ಹುಬ್ಬಳ್ಳಿ ಜಿಲ್ಹಾ ಧಾರವಾಡ.

ತಾರೀಖು ೫—೯—೧೯೩೨ ಗಣಪತೆಪ್ಪಣ್ಣಾ ಮುನಸಿಪಾಲಿಟಿ ಮೆಂಬರ
" " " " ಕಾಳಪ್ಪಣ್ಣಾ ಜೈನಬಸ್ತಿ

## ಜಿಲ್ಹಾ ವಿಜಾಪುರ.

ತಾರೀಖು ೩—೧೦—೧೯೩೨ ಮಹಿಳಾಸಮಾಜ ಬಾಗಲಕೋಟೆ

---

# ಮುನ್ನುಡಿ.



ಹೇಮರಡ್ಡಿಯು ಮನೆಯ ಯಜಮಾನನು. ಪದ್ಮಮ್ಮನು ಹೇಮರಡ್ಡಿಯ ಧರ್ಮಪತ್ನಿಯು. ಭರಮರಡ್ಡಿ, ವೇಮರಡ್ಡಿ ಇವರಿಬ್ಬರು ಮಕ್ಕಳು. ನಾಗಮ್ಮ, ಬಸವಮ್ಮ, ಮಲ್ಲಮ್ಮ, ಲಿಂಗಮ್ಮ ಇವರೇ ಹೇಮರಡ್ಡಿಯ ಸೊಸಿಯರು. ಬಹು ಸಂಖ್ಯಾಕವಾದೀ ಕುಟುಂಬವು ಶ್ರೀಶೈಲದ ಸಮೀಪದಲ್ಲಿ ಸಿದ್ದಾಪುರವೆಂಬ ಪ್ರಸಿದ್ಧ ಗ್ರಾಮದಲ್ಲಿ ವಾಸಮಾಡುತ್ತಿತ್ತು. ಹೇಮರಡ್ಡಿಯ ಸೊಸಿಯರಲ್ಲಿ ಮಲ್ಲಮ್ಮನು ಗುಣವಂತಿಯೂ ಆಚಾರವತಿಯೂ ಇದ್ದು ಅತ್ತಿ-ಮಾವಂದಿರ ಆಜ್ಞೆಯಲ್ಲಿಯೂ ಪತಿಸೇವೆಯಲ್ಲಿಯೂ ಭಾವ-ಮೈದುನರ ಸತ್ಕಾರಗಳಲ್ಲಿಯೂ ಆಸಕ್ತಳಾಗಿ, ನೆಗೆವೆಣ್ಣಿಯರೊಡನೆ ಸರಳವಾದ ಪ್ರೇಮಭಾವದಿಂದ ನಡೆದುಕೊಳ್ಳುವ ಸುಸ್ವಭಾವವುಳ್ಳವಳು. ಮನೆಗೆ ಬಂದ ಶಿವಯೋಗಿಗಳಿಗೆ ಪ್ರಸಾದವನ್ನು ಕೊಟ್ಟು ಸತ್ಕರಿಸುವದೊಂದು ಪರಮ ಶಿವಭಕ್ತಳಾದ ಮಲ್ಲಮ್ಮನ ನಿತ್ಯ ಕರ್ಮಗಳಲ್ಲಿ ಮುಖ್ಯವಾದ ಕರ್ಮವಾಗಿತ್ತು. ಮಲ್ಲಮ್ಮನು ಪ್ರತಿ ದಿವಸದಲ್ಲಿಯೂ ತನ್ನಿಷ್ಟಲಿಂಗವನ್ನು ಯಥಾಕ್ರಮವಾಗಿ ಪೂಜಿಸಿ ನಂತರ ಮಲ್ಲಿಕಾರ್ಜುನನ ಲಿಂಗದರ್ಶನವನ್ನು ಮಾಡಿಕೊಳ್ಳುವ ವ್ರತವನ್ನು ಕೈಕೊಂಡಿದ್ದಳು. ಭಾಗ್ಯಲಕ್ಷ್ಮಿಯಾದ ಮಲ್ಲಮ್ಮನು ಮನೆಗೆ ಬಂದಮೇಲೆ ಹೇಮರಡ್ಡಿಯ ಐಶ್ವರ್ಯವು ದಿನೆ ದಿನೆ ಹೆಚ್ಚುತ್ತಾ ನಡೆಯಿತು. ಇದರಿಂದ ಹೇಮರಡ್ಡಿಯು ಮಲ್ಲಮ್ಮನನ್ನು ಕೇವಲ ಗೃಹಲಕ್ಷ್ಮಿಯೆಂದು ಬಹು ಪ್ರೇಮದಿಂದ ಕಾಣುತ್ತಿದ್ದನು. ಸಿದ್ದಾಪುರದ ಜನರೆಲ್ಲರೂ ಮಲ್ಲಮ್ಮನನ್ನು ಬಹು ಪ್ರಕಾರವಾಗಿ ಸ್ತೋತ್ರ ಮಾಡಹತ್ತಿದರು.ಮಲ್ಲಮ್ಮನ ಸದ್ಗುಣಗಳನ್ನು ಸಹಿಸಲಾರದೆ ಇತ್ತ ನೆಗೆವೆಣ್ಣಿಯರು ಆಗಾಗ್ಗೆ ಆವಳಮೇಲೆ ಅಸತ್ಯವಾದ ದೋಷಗಳನ್ನು ಆರೋಪಿಸುತ್ತ ಅತ್ತಿಯವರ ಮನಸ್ಸನ್ನು ತಮ್ಮ ವಶಮಾಡಿಕೊಂಡು ಮುಗ್ಧಳಾದ ಮಲ್ಲಮ್ಮನಿಗೆ ಪರಿಪರಿಯಿಂದ ಕಷ್ಟಗಳನ್ನು ಕೊಡಲುಪಕ್ರಮಿಸಿದರು. ಅತ್ತಿಯಾದ ಪದ್ಮಮ್ಮನಾದರೂ ವಿಚಾರಮಾಡದೆ ಕೇವಲ ನೆಗೆವೆಣ್ಣಿಯರ ಮಾತಿಗೆ ಕಿವಿಗೊಟ್ಟು ಆಜ್ಞಾಧಾರಕಳಾದ ಮಲ್ಲಮ್ಮನನ್ನು

ಅನೇಕ ಕಷ್ಟಗಳಿಗೀಡುಮಾಡಿ ಕಡೆಗೆ ಗೋಸೇವೆಯನ್ನು ಮಾಡುವದಕ್ಕಾಗಿ ಕಾಡಿಗೆ ಕಳುಹಿಸಿದಳು. ಮಲ್ಲಮ್ಮನು ಗುಣವತಿಯು, ವಿಚಾರವತಿಯು ಆದುದರಿಂದ ಬಂದ ಕಷ್ಟಗಳನ್ನು ಸಹಿಸುತ್ತಾ ಅತ್ತೆಯವರ ಕಠಿಣವಾದಾಜ್ಞೆಯನ್ನು ದಕ್ಷತೆಯಿಂದ ಪಾಲಿಸುವದಲ್ಲದೆ ತನ್ನ ಶಿವಪೂಜಾದಿ ನಿತ್ಯ ನಿಯಮಗಳನ್ನು ಸಹ ತಪ್ಪದೇ ಆಚರಿಸುತ್ತಿದ್ದಳು. ಮಲ್ಲಮ್ಮನ ಅತುಲಿತವಾದ ಶಿವಭಕ್ತಿಗೆ **ಶ್ರೀ ಮಲ್ಲಿಕಾರ್ಜುನನು** ಪ್ರಸನ್ನನಾಗಿ ಸಮಯಾನುಸಾರ ತಾನೆ ಬಂದು ಅದೃಶ್ಯನಾಗಿ ಮಹಾ ಭಕ್ತಳಾದ ಮಲ್ಲಮ್ಮನ ಗೋ-ಸೇವಾ ಮುಂತಾದ ಕಾರ್ಯಗಳನ್ನು ಪೂರೈಸಿ ಕಷ್ಟಗಳನ್ನು ಪರಿಹರಿಸಲು ತೊಡಗಿದನು. ಮಲ್ಲಮ್ಮನು ತನ್ನ ಅಸಾಧಾರಣ ಹಾಗೂ ಅಕೃತಿಮವಾದ ಶಿವಭಕ್ತಿಗೆ ಪತ್ಯಕ್ಷನಾದನು. ಶ್ರೀ ಮಲ್ಲಿಕಾರ್ಜುನನ ಅನುಗ್ರಹದಿಂದ ಒಬ್ಬ ಶಿವಯೋಗಿಯ ಶಾಪದಿಂದ ಸುಟ್ಟು ಹಾಳಾಗಿಹೋದ ತನ್ನ ಮಾವನಾದ ಹೇಮರಡ್ಡಿಯ ಮನೆಯನ್ನು ಪುನಃ ಸಕಲೈಶ್ವರ್ಯದಿಂದ ಕೂಡಿದ್ದನ್ನಾಗಿ ಮಾಡುವದು. ಭೂಮಿಯಲ್ಲಿ ಮಳಲನ್ನು ಬಿತ್ತಿ ಧಾನ್ಯವನ್ನು ಬೆಳೆಯುವದು. ಸಗಣಿಯ ತಿಪ್ಪಿಯನ್ನು ಹೊನ್ನಿನ ರಾಶಿಯನ್ನಾಗಿ ಮಾಡುವದು. ಹುಚ್ಚನಾದ ತನ್ನ ಪತಿಯನ್ನು ಜ್ಞಾನಿಯನ್ನಾಗಿ ಮಾಡುವದು. ಇವೇ ಮೊದಲಾದನೇಕ ಮಹತ್ವಗಳನ್ನುಮಾಡಿ ಲೋಕ ಪ್ರಸಿದ್ಧಳಾದಳು. ಇಂಥ ಮಹಾತ್ಮಳಾದ ಮಲ್ಲಮ್ಮನೇ ಪ್ರಸ್ತುತ ನಮ್ಮ ನಾಟಕದ ಕಥಾನಾಯಿಕಳಾಗಿರುವಳು, ಇವಳ ಅಸಾಧಾರಣವಾದ ಶಿವಭಕ್ತಿ, ಪತಿಭಕ್ತಿ, ಬಂಧುಪ್ರೀತಿ, ಸಹನ ಶೀಲತೆ ಮುಂತಾದ ಉದಾತ್ತ ಗುಣಗಳಿಂದ ಗರ್ಭಿತನಾದೀ ಚರಿತ್ರದ ಪ್ರಸಾರಮೂಲಕವಾಗಿ ಸಮಾಜ ಸೇವೆಯನ್ನು ಮಾಡಬೇಕೆಂಬ ಸದುದ್ದೇಶದಿಂದಲೇ ಈ ನಾಟಕವನ್ನು ರಚಿಸಿದೆವು. ಈ ನಾಟಕವು ಸ್ತ್ರೀ ಸಮಾಜಸುಧಾರಕ ತತ್ವಗಳಿಗೆ ಆಕರಪ್ರಾಯವಾಗಿರುವದಲ್ಲದೆ ಅತ್ತೆ, ಸೊಸಿ, ನಗೆವೆಣ್ಣೆಯರ ಗುಣದೋಷಗಳನ್ನರಿತುಕೊಳ್ಳಲಿಕ್ಕೆ ಆದರ್ಶಭೂತವಾಗಿರುವದು. ವಾಚಕಮಹಾಶಯರು ಇದನ್ನೋದಿ, ನೋಡಿ ಆನಂದಪಟ್ಟಲ್ಲಿ ನಮ್ಮ ಉದ್ದೇಶವು ಸಾರ್ಥಕವಾಯಿತೆಂದು ಭಾವಿಸುವೆವು. **ಸಗಡದಿನ್ನಿ ಬೃಹನ್ಮಠದ ವೇ|| ಪಂಡಿತ, ಕಲಿಗಣನಾಥ ಶಾಸ್ತ್ರಿ**ಗಳು ತರ್ಕ ತೀರ್ಥ ಈ ಮಹಾಶಯರು ಈ ನಾಟಕದ ಮುಖ್ಯ ಮುಖ್ಯ

ಸ್ಥಾನಗಳಲ್ಲಿ ಪ್ರಕೃತೋಪಯುಕ್ತಗಳಾದುದಾತ್ತ ತತ್ವಗಳನ್ನು ಸೇರಿ ಮಹೋಪಕಾರವನ್ನು ಮಾಡಿದ್ದಕ್ಕಾಗಿ ಅವರ ವಿಷಯದಲ್ಲಿ ಅತ್ಯಂತ ಕೃತಜ್ಞ ರಾಗಿರುವೆವು. ಈ ನಾಟಕದಲ್ಲಿ ಮಲ್ಲಮ್ಮನ ಮತ್ತು ಮಲ್ಲಿಕಾರ್ಜುನ ಪಾತ್ರವನ್ನು ವಹಿಸತಕ್ಕವರಿಗೆ ಅನೇಕ ಪ್ರಾಂತದ ಮಹಾಜನಗಳು ಮತ್ತು ಮಹಿಳಾ ಸಮಾಜದವರು ಸುವರ್ಣ ಪದಕಗಳನ್ನೂ ಮಾನಪತ್ರಗಳನ್ನೂ ಪದವಿಗಳನ್ನೂ ಕೊಟ್ಟು ಗೌರವಿಸಿದುದಕ್ಕಾಗಿ ಅವರ ಉಪಕಾರವು ನಮ ಚಿರಸ್ಮರಣೀಯವಾಗಿದೆ. ಆ ಮಹಾಶಯರ ಹೆಸರುಗಳನ್ನು ವಾಚಕರ ಲೋಕನಕ್ಕಾಗಿ ಇದರೊಂದಡಿಯಲ್ಲಿ ಮುದ್ರಿಸಲ್ಪಟ್ಟವೆ. ದೇವರಿವರೆಲ್ಲರಿಗ ಚಿರಾಯುರಾರೋಗ್ಯ ಭಾಗ್ಯೋದಯಾದಿಗಳನ್ನು ದಯಪಾಲಿಸಲೆಂ ಆಸಿಸುವೆವು.

ಸಂಘದೊಡೆಯರು :

ಶಿವಶರಣ ಸೇವಾಧುರೀಣ ಸದ್ಭಕ್ತ ಶಿರೋಮಣಿ,
ಕೆ. ಬಿ. ಕೊಟ್ಟೂರ ಬಸವಪ್ಪನವರು



|| ಶ್ರೀಃ ಮಲ್ಲಿಕಾರ್ಜುನ ಪ್ರಸೀದತು ||



# ಹೇಮರಡ್ಡಿ ಮಲ್ಲಮ್ಮ

## ಪ್ರಥಮಾಂಕ.

### ೧ ನೇ ಪ್ರವೇಶ.

( ನಾಗಮ್ಮ , ಲಿಂಗಮ್ಮ , ಬಸಮ್ಮ , ಇವರ ಪ್ರವೇಶ. )

**ಹೇಮರಡ್ಡಿಯ ಮನೆ.**

ನಂಬರ ೧. ಪದ ರಾಗ– ಯಮುನಾ ತಾಲ. ತ್ರಿವಿಟ

**ನಾಗಮ್ಮ**— ಸುಮಾನಶೆ | ಪ್ರೇಮದಿ ಇಹ ಮಲ್ಲಮ್ಮ ತಾನು |
ಪೂರ್ಣಪ್ರೇಮತೋಷಾ ||
ಇಂತು ಬಾಹ್ಯದೋಳಾಡಂಬರವೆ | ಎಂತಹ ಮುರಕಾ
ಮಾಡುವಳೆ ||೧||

ತಂಗೀ ಈ ಮನೆಯ ಸೊಸೆಯರಾದ ನಮ್ಮ ಐವರಲ್ಲಿ ಮೂರನೆಯವಳಾದ ಮಲ್ಲಮ್ಮನು ತನ್ನ ಗಂಡನನ್ನು ಎಷ್ಟು ಪ್ರೀತಿಸುತ್ತಿರುವಳೆ? ಅತ್ತೆ–ಮಾವಂದಿರ ಕೂಡ ಮಾತಾಡಬೇಕಾದರೆ ಎಂಥ ಮುರುಕ ಮಾಡುವಳು?

ಮನೆಗೆ ಯಾರಾದರೂ ಅತಿಥಿಗಳು ಬಂದರೆ ಬಹು ಭಕ್ತಿಯಿಂದ ನಸು ನಗುತ್ತ ಉಪಚಾರ ಮಾಡುವಳು. ನೋಡಿದಿಯಾ?

ಲಿಂಗಮ್ಮ— ಅಕ್ಕಾ, ಇಷ್ಟೇ ಏಕೆ? ಪ್ರತಿದಿವಸ ಉದಯಕ್ಕೆ ಎದ್ದು ಗುರುವೇ ನಮ್ಮಪ್ಪ, ಮಲ್ಲಪ್ಪ, ಮಲ್ಲಯ್ಯಾ ಎಂದು ಯಾವನೋ ಒಬ್ಬ ಮಲ್ಲಯ್ಯನನ್ನು ಧ್ಯಾನಿಸುವಳು. ಆಮೇಲೆ ಮುಖವನ್ನು ತೊಳೆದುಕೊಂಡು ವಿಭೂತಿಯನ್ನು ಧರಿಸಿ ಬೈತಲೆಯನ್ನು ತಿದ್ದಿ ಅತ್ತಿ - ಮಾವಂದರಿಗೂ ತನ್ನ ಗಂಡನಿಗೂ ನಮಸ್ಕಾರವನ್ನು ಮಾ-ಡುವಳು. ಅವಳ ಬಡಿವಾರ ಏನು ಹೇಳಲಿ? ಬಡಿವಾರದ ಬಾನಗಿತ್ತಿ ನೋಡವ್ವಾ!

ನಾಗಮ್ಮ— ತಂಗೀ, ಇವಳು ಏನು ಮಾಡಿದರೂ ಕೂಡ ಅತ್ತಿ-ಮಾವಂದಿರು ಸುಮ್ಮನೆ ಇರುವರಲ್ಲೆ?

ಲಿಂಗಮ್ಮ— ಅತ್ತಿಯವರ ಮುಂದೆ ಮಾವನವರು ಹೇಳುವದನ್ನು ನೀನು ಕೇಳಿದಹಾಗೆ ಕಾಣಲಿಲ್ಲ.

ನಾಗಮ್ಮ— ತಂಗೀ, ಅದೇನು ಹೇಳು ನೋಡುವಾ?

ಲಿಂಗಮ್ಮ— ಈ ಮಲ್ಲಮ್ಮನು ಬಹಳ ಪುಣ್ಯವಂತಿ. ಇವಳು ಬಂದಾಗಿನಿಂದ ಲಾಗಾಯತು ನಮ್ಮ ಮನೆಯ ಸಂಪತ್ತು ಹೆಚ್ಚುತ್ತಿರುವದು. ಎಂದು ಪದೆ ಪದೆ ಹೇಳುತ್ತಾರೆ.

ನಾಗಮ್ಮ— ಅದಕ್ಕೆ ಅತ್ತಿಯವರೇನೆನ್ನುವರು?

ಲಿಂಗಮ್ಮ— ಅತ್ತಿಯವರಾದರೂ ಮಾವನ ಮಾತಿಗೆ ಹೌದು ಹೌದು; ಎಂದು ತಲೆದೂಗುತ್ತಿರುವರು. ಅಂದಮೇಲೆ ಇನ್ನು ಹೇಳುವದೇನು?

ನಂಬರ ೨. ಪದ ರಾಗ- ಮಾಂಡ ತಾಲ- ತ್ರಿತಾಲ

ಲಿಂಗಮ್ಮ— ಆನಂದದಲಿ ಧ್ಯಾನವಾ | ಮಾಡುವಾ ವೃದ್ಧ ಸದಾ ||
ನಾಗಣಿಶಿಲೋಕದಾ | ಹೀನಾಪವಾದಾ ಏನ್ಹೇಳಲಿ |
ಆಸ್ರುಜೆ | ಮಾಡುವ ವೃದ್ಧ ಸದಾ ||೧||

ಅಕ್ಕಾ ಈ ಮಲ್ಲಮ್ಮನು ಬಂದಮೇಲೆ ನಾವೂ ನೀವೂಕೂಡಾ ಅತ್ತಿ-ಮಾವಂದಿರ ಕಣ್ಣಿಗೆ ಕವಡಿಗಿಂತಲೂ ಕಡಿಯಾಗಿ ಕಾಣುತ್ತಿರುವೆವು.

**ನಾಗಮ್ಮ**— ತಂಗೀ ಹಿರೇಸೊಸಿಯರಾದ ನಮಗೆ ಈ ಮನೆಯಲ್ಲಿ ಎಳ್ಳು ಕಾಳಷ್ಟಾದರೂ ಮರ್ಯಾದೆಯಿಲ್ಲ. ಪ್ರತಿ ಒಂದು ಕೆಲಸದಲ್ಲಿ ಅವಳನ್ನೇ ಯಜಮಾನಿಯನ್ನು ಮಾಡಿರುವರು. ನಾವೂ ಕೂಡಾ ಅವಳು ಹೇಳಿದಹಾಗೆ ಕೇಳಬೇಕಾಗಿರುವದು. ಹೀಗಾದರೆ ನಾವು ಈ ಮನೆಯಲ್ಲಿ ಹೇಗೆ ಬಾಳ್ವೆ ಮಾಡಬೇಕು?

**ಲಿಂಗಮ್ಮ**— ಅಕ್ಕಾ, ನನಗಂತೂ ನೋಡೀ ನೋಡೀ ಸಾಕಾಗಿರುವದು. ಈ ಮಲ್ಲಮ್ಮನ ಮೇಲೆ ಅತ್ತಿ - ಮಾವಂದಿರ ಮನಸ್ಸು ಬೇಸರವಾಗು ವಂತೆ ನಾವು ಮಾಡದಿದ್ದರೆ ನಮಗೆ ಖಂಡಿತವಾಗಿ ಈ ಮನೆಯಲ್ಲಿ ಮರಿಯಾದಿ ಸಿಗಲಾರದು.

**ನಾಗಮ್ಮ**— ತಂಗೀ ಅತ್ತಿ - ಮಾವಂದಿರ ಮನಸ್ಸು ಅವಳ ಗಂಡನಾದ ಹುಚ್ಚ ಭರಮರಡ್ಡಿಯ ಮನಸ್ಸು ಬೇಸರವಾಗುವಂತೆ ಮಾಡುವದಕ್ಕೆ ಉಪಾಯವೇನು?

**ಲಿಂಗಮ್ಮ**— ನಾಗವ್ವಾ, ಇದಕ್ಕೆ ಬೇರೆ ಉಪಾಯವೇಕೆ? ಅವಳಮೇಲೆ ದುರಪವಾದಗಳನ್ನು ಹೊರಿಸಿದರೆ ಅತ್ತೆ - ಮಾವಂದಿರ ಮನಸ್ಸು ಹಾಗೂ ಅವಳ ಗಂಡನಾದ ಹುಚ್ಚ ಭರಮರಡ್ಡಿಯ ಮನಸ್ಸು ತನ್ನಷ್ಟಕ್ಕೆ ತಾನೇ ಬೇಸರಾಗುವದು.

**ನಾಗಮ್ಮ**— ಹಾಗೆ ಮಾಡದಿದ್ದರೆ ಬರಬರುತ್ತಾ ನಮಗೆ ಕಠಿಣ ಪ್ರಸಂಗವೇ ಬರಬಹುದು. ಇದಕ್ಕೆ ತಕ್ಕ ಆಲೋಚನೆಯನ್ನು ಹುಡುಕು. ನಾನಂತೂ ನೀನು ಹೇಳಿದಹಾಗೆ ಕೇಳುವೆನವ್ವಾ!

**ಲಿಂಗಮ್ಮ**— ಅಕ್ಕಾ ಅವಳು ಉದಯಕ್ಕೆ ಎದ್ದು ಗಡಿಗೆಗಳನ್ನು ತೊಳೆದು ನೀರು ತರುವದಕ್ಕಾಗಿ ಭಾವಿಗೆ ಹೋಗುವಳು. ಆ ವೇಳೆಯಲ್ಲಿ ನಾನು ಗಡಿಗೆಗಳನ್ನೆಲ್ಲ ಒಡೆದಿಡುವೆನು. ಅತ್ತಿಯವರು ಬಂದು ಕೇಳಿದರೆ ಅವಳೇ—ಆ ಮಲ್ಲವ್ವನೇ ಒಡೆದಳೆಂದು ಹೇಳಬೇಕು ನೋಡು.

**ನಾಗಮ್ಮ—** ತಂಗೀ, ಒಳ್ಳೇ ಉಪಾಯವನ್ನು ಹುಡುಕಿದಿ. ನಡಿ ಇನ್ನು ನಮ್ಮ ನಮ್ಮ ಕೆಲಸಕ್ಕೆ ಹೋಗುವಾ.

(ಹೋಗುವರು)

(ಈಶ್ವರ ಪ್ರವೇಶ)

ನಂಬರ ೩ ಪದ ರಾಗ-ಭೂಪ ತಾಲ-ತ್ರಿವ:

**ಈಶ್ವರ—** ಹೇಮರಡ್ಡಿಯ ಸೊಸಿಯು | ಮಹಾತ್ಮಳು |
ಪ್ರೇಮವತಿಯು ತಾ | ನಾರಿಯ ಕುಲದಾ |
ವಿರಳ ವ್ರತವನು ನಾವರೀಯಲು ||೧||
ಅರುಣನು ಉದಯಿಪ | ಮುಂದು ಸಮಯದಿ |
ತರುಣಿಯು ತಪ್ಪದಲೇ ಸ್ಮರಿಪಳೋ ||೨||

ಆಹಾ! ಈ ಸಿದ್ದಾಪುರದ ಹೇಮರಡ್ಡಿಯ ಮಧ್ಯ ಸೊಸೆಯಾ ಮಲ್ಲಮ್ಮನು ಎಂಥ ಮುಗ್ಧಭಕ್ತಳಾಗಿರುವಳು. ಜಾಗೃತ್ಸ್ವಪ್ನಸ ಷುಪ್ತಿಗಳಲ್ಲಿಯೂ 'ಶ್ರೀಶೈಲನಾಥ ಮಲ್ಲಿಕಾರ್ಜುನ ಮಲ್ಲಯ್ಯಾ' ಎಂದು ನ್ನನ್ನ ಧ್ಯಾನವನ್ನು ತನ್ನ ಹೃದಯದಲ್ಲಿ ಪೂರ್ಣವಾಗಿ ಸ್ಥಾ ಸಿರುವಳಲ್ಲ! ಇಂಥ ಮಲ್ಲಮ್ಮನ ನಿಜವಾದ ಭಕ್ತಿಯನ್ನು ನೋ ಸಹಿಸಲಾರದೆ ನಗೆವೆಣ್ಣೆಯರು ದೋಷಗಳನ್ನು ಕಲ್ಪಿಸಿ ಅತ್ತಿ-ಮಾ ಗಂಡಂದಿರಿಂದ ಬಹಿಷ್ಕೃತಳನ್ನಾಗಿ ಮಾಡಬೇಕೆಂದು ಯೋಚಿಸುತ್ತಿ ರುವರಲ್ಲ! ಏನು ಅನ್ಯಾಯವಾದ ಕಲಿಯುಗವಿದು?

ಪರತರಾಚಾರವಂತಗೆ ಕುಲಗೇಡಿ ಎಂಬುವರು
ಕಲಿಯುಗದ ಜನರು || ವ್ರತಸ್ಥನಿಗೆ ಡಾಂಭಿಕನೆಂದು
ನುಡಿಯುವರಯ್ಯಾ || ವರಮತಿಯುತಗೆ ಜಡನೆಂಬುವರು | ನು
ಅಮಲತರ ವಸ್ತ್ರಭೂಷಿತಗೆ | ಸೋಗಿನವನೆಂದಾಡುವರು
ಧರೆಯೊಳೆಂದೂರ್ಜಡೇಂ | ನರರಿಂನಿಂದೆ ಒಪ್ಪುದು ಸಹಜವಿ
ಕಾರಣ ||೧|

ಈ ಕಲಿಯುಗದ ಪಾಮರ ಮನುಷ್ಯನನ್ನು ಒಲಿಸುವದು ಬಹಳ ಕಷ್ಟವೆಂಬುವ ಮಾತು ಈ ಮಲ್ಲಮ್ಮನ ವಿಷಯದಲ್ಲಿ ಪ್ರತ್ಯಕ್ಷವಾ

ಯಿತು. ನಾನಾದರೂ ಮಲ್ಲಮ್ಮನ ಭಕ್ತಿಯನ್ನು ಪರೀಕ್ಷೆ ಮಾಡಬೇಕೆಂದು ಕೈಲಾಸದಿಂದ ಬಂದಿರುವೆನು ಕಾರಣ ಈ ರೂಪವನ್ನು ಮಾಜಿ, ಹಳೇದಾದ ಹರಕು ಬಟ್ಟೆಗಳಿಂದ ಅಲಂಕೃತನಾಗಿ ತಿರುಕನಂತೆ ಹೇಮರಡ್ಡಿಯ ಮನೆಯನ್ನು ಪ್ರವೇಶಮಾಡುವೆನು.

(ಹೋಗುವನು

( ಮಲ್ಲಮ್ಮನು ನೀರು ಹೊತ್ತುಕೊಂಡು ಬರುವಳು )

ನಂಬರ ೪. ಪದ ರಾಗ- ಭೈರವಿ ತಾಲ- ತ್ರಿತಾಳ.

ಮಲ್ಲಮ್ಮ— ಸಂಸಾರಸಾರಮಾಯಾ | ಪರಿಯಾ ವಿಚಾರಿಸಿದೆ ||
ಮಾತೆಯ ಗರ್ಭದೋಳಿಂದಾ | ಬಂದು ತಾಯಿದೇಹಾ
ಮಾತುಮಾತಿಗೆಗೋರ್ವ ನಾಥನ | ಪ್ರೇಮವೆಂತೂ ||೧||

ಉದಯಕಾಲದ ನಿತ್ಯ ಕರ್ಮಗಳನ್ನು ತೀರಿಸಿಕೊಂಡು ಅಡಿಗೆಯನ್ನು ಮಾಡುವದಕ್ಕಾಗಿ ಮಡಿ ನೀರನ್ನು ತೆಗೆದುಕೊಂಡು ಬಂದೆನು ಅತ್ತಿಯುವರು ಬರುವ ವೇಳೆವಾಯಿತು. ಇನ್ನು ಅಡಿಗೆಯನ್ನು ಮಾಡುವೆನು.

(ನಾಗಮ್ಮ, ಲಿಂಗಮ್ಮರ ಪ್ರವೇಶ)

ಲಿಂಗಮ್ಮ— ಮಲ್ಲಮ್ಮ, ಇನ್ನೂ ನೀನು ಅಡಿಗೆಯನ್ನು ಮಾಡಿದಂತೆ ಕಾಣಲಿಲ್ಲ. ಕೃಷಿಕಾರ್ಯಕ್ಕೆ ಹೋದ ಭಾವ-ಮೈದುನರಿಗೆ ಬುತ್ತಿಯನ್ನು ತೆಗೆದುಕೊಂಡು ಹೋಗಿರಿ ಎಂದು ಅತ್ತಿಯುವರು ಆಗಲೇ ಹೇಳಿರುವರು. ನೀನು ವ್ಯಾಳ್ಯಕ್ಕೆ ಸರಿಯಾಗಿ ಅಡಿಗೆಯನ್ನು ಮಾಡದಿದ್ದರೆ ಅತ್ತಿಯುವರ ಮುಂದೆ ನಾವು ಏನು ಹೇಳಬೇಕು ?

ಮಲ್ಲಮ್ಮ— ಅಕ್ಕಾ, ಪಾಕವೆಲ್ಲಾ ಸಿದ್ಧವಾಗಿರುವದು. ಈ ದಿನ ಮಡಿ ನೀರನ್ನು ತರುವದು ಸ್ವಲ್ಪ ತಡವಾದ್ದರಿಂದ ವ್ಯಾಳ್ಯೆವಾಯಿತು. ನೀವು ಹೀಗೆ ಪದೆ ಪದೇ ನನಗೆ ಎಚ್ಚರಿಕೆಯನ್ನು ಕೊಡುವದರಿಂದ ಮಹಾ ಉಪಕಾರವನ್ನು ಮಾಡಿದಂತಾಗುವದು.

ನಾಗಮ್ಮ— ಮಲ್ಲಮ್ಮಾ, ನಮಗೆ ಈ ಮನೆಯಲ್ಲಿ ಅಷ್ಟು ಯೋಗ್ಯತೆ ಇದ್ದರೆ, ಈ ರೀತಿ ನಮ್ಮನ್ನು ಪರಿಹಾಸ್ಯ ಮಾಡುತ್ತಿರಲಿಲ್ಲಾ. ಆದರೂ

ಪ್ರಯತ್ನಪಟ್ಟು ನೀನು ನಮ್ಮೊಡನೆ ಕಲಹ ಮಾಡಬೇಕೆಂದಿರುವಿ. ಕಾರಣ ಈ ಮೊದಲು ನಿನ್ನ ಸಹವಾಸವೇ ನಮಗೆ ಬೇಡ. ನಿನ್ನ ಸಂಗಡ ಮಾತನಾಡುವದಂತೂ ಮೊದಲೇ ಬೇಡ.

**ಮಲ್ಲಮ್ಮ—** ಅಕ್ಕಾ, ನಾವು ಬಹು ಕುಟುಂಬಿಗಳಾದ್ದರಿಂದ ಕಲಹವನ್ನು ಮಾಡಿಕೊಂಡರೆ ಸರಿಮನೆತನದವರು ಅಪಹಾಸ್ಯಮಾಡುವದಿಲ್ಲವೆ! ನಿಮ್ಮ ಆಣೆಯಾಗಿ ನಾನು ನಿಮಗೆ ಪರಿಹಾಸ್ಯಮಾಡುವವಳಲ್ಲ. ಏನೂ ತಿಳಿಯದವಳಾಗಿರುವದರಿಂದ ಕೆಲವರು ನನ್ನನ್ನು ಹುಚ್ಚ ಮಲ್ಲವ್ವಾ ಎಂದು ಕರಿಯುತ್ತಿರುವರು.

**ಲಿಂಗಮ್ಮ—** ಎಲೆ, ಹುಚ್ಚಿಯಂತೆ ಇದ್ದು ನಮ್ಮನ್ನೆಲ್ಲಾ ಹೀಯಾಳಿಸು ಹಾಗೆ ಮಾಡಿರುವಿ. ಇನ್ನುಮೇಲೆ ನೀನು ಈ ಮನೆಯಲ್ಲಿ ಬಾ ಮಾಡುವದು ತಿಳಿಯುವದಲ್ಲವೆ ? ಗಂಡನನ್ನು ಅಧೀನದಲ್ಲಿ ಇಟ ಕೊಂಡಿರುವದಲ್ಲದೆ ಮಾವನನ್ನು ಸಹ ಮರಳು ಮಾಡಿಕೊಂಡಿರು ನೆಂಬ ಗರ್ವದಿಂದ ಮಾತನಾಡುವಿಯಾ ? ಗೈಯಾಳಿ ! ಈ ಮನೆ ಅಧ್ಯಕ್ಷತೆಯನ್ನು ನೀನೇ ವಹಿಸಿಕೊಂಡು ಬಂದಿರುವಿಯೇನೆ ?

**ಮಲ್ಲಮ್ಮ—** ಅಕ್ಕಾ, ನನಗಿಂತಲೂ ನಿಮಗೆ ಹೆಚ್ಚಿನ ಸ್ವಾತಂತ್ರ್ಯವಿಲ್ಲ ನಾನು ನಿಮ್ಮ ಕೈಕೆಳಗಿನವಳು. ಇಗೋ ನಿಮ್ಮ ಪಾದಮುಟ್ಟಿ ಹೇ ವೆನು ಶ್ರೀ ಮಲ್ಲಿಕಾರ್ಜುನನ ಸಾಕ್ಷಿಯಾಗಿ ನಿಮಗೆ ನಾನು ಎಂದಿಗ ಪ್ರತಿಕೂಲವಾಗಿ ನಡೆಯತಕ್ಕವಳಲ್ಲ.

**ನಾಗಮ್ಮ—** ತಂಗೀ ನೋಡಿದಿಯಾ, ಆ ಮಲ್ಲಯ್ಯನ ಭ್ರಾಂತಿ ಇವ ತಲೆ ಹಿಡಿದಿರುವದು. ನಿಂತರೂ ಕುಂತರೂ ಮಲ್ಲಯ್ಯಾ, ಮಲ್ಲಯ ಅನ್ನುತ್ತಾಳೆ.

(ತಿರುಕನ ಪ್ರವೇಶ)

ನಂಬರ ೫ ಪದ ರಾಗ– ಸಾರಂಗ ತಾಲ– ಕ

ತಾನು ಗೈದಕರ್ಮಕೆ ತಾನೆ | ಭೋಗಿಯಾಗಬೇಕೈ ||
ಭೋಗಿಯಾಗಬೇಕೈ | ತ್ಯಾಗಿಯಾಗಬೇಕೈ ||೧||

ಹಸ್ತಪಾದ ಮಾಳ್ಪವುಕರ್ಮ | ಕರ್ತೃಭೋಗಿಪುದು ಇಂದ್ರಿ
ಯಗಳ್ || ಮತ್ತೆ ಕಷ್ಟಸುಖತಾಬರಲು | ನಗುವದಳುವ
ದೇಕೆ ||೨||

ಅವ್ವಾ, ಮನೆಯಲ್ಲಿ ಯಾರಿರುವಿರಿ. ತಾಯಿ, ಈ ತಿರುಕನಿಗೆ ತುತ್ತು ರೊಟ್ಟಿಯನ್ನು ಕೊಡಿರಮ್ಮಾ.

ಮಲ್ಲಮ್ಮ— ಅಹಾ, ಯಾವನೋ ಒಬ್ಬ ಅತಿಥಿಯು ಹಸಿದುಕೊಂಡು ಒಂದು ತುತ್ತು ಅನ್ನವನ್ನು ಬೇಡುತ್ತಿರುವನು. ನಿನ್ನೇ ದಿವಸ ಮಾಡಿದ ರೊಟ್ಟೀ ಚೂರು ಇರುವದು. ತೆಗೆದುಕೊಂಡು ಹೋಗಿ ನೀಡುವೆನು.

ಲಿಂಗಮ್ಮ— ಅಹಾ, ಇದು ಒಳ್ಳೇ ಸಮಯವು. ಒಳಗೆ ಹೋಗಿ ಗಡಿಗೆಗಳ್ನು ಒಡೆದು ಬರುವೆನು. ( ಹೋಗುವಳು. )

ಮಲ್ಲಮ್ಮ— ಅಪ್ಪಾ, ಇಗೋ ತೆಗೆದುಕೋ. (ಎಂದು ನೀಡುವಳು.)

ತಿರುಕ— ಅವ್ವಾ, ರೊಟ್ಟಿ ಚೂರು ನೀಡಿದಿ. ತಾಯಿ ಇದಕ್ಕೆ ಸ್ವಲ್ಪ ಪಲ್ಲೆಏನಾದರೂ ಇದ್ದರೆ ನೀಡು.

ಲಿಂಗಮ್ಮ— ಎಲೋ ರೊಟ್ಟೀ ಹಾಕಿದ್ದಲ್ಲದೇ, ಮತ್ತೂ ಪಲ್ಲೆಯನ್ನೂ ಕೇಳುವಿಯಾ ? ನಾವೇ ಹೊಟ್ಟೆಗಿಲ್ಲದೆ ಬಳಲುತ್ತಿರುವೆವು. ಸುಮ್ಮನೆ ಹೋಗು.

ತಿರುಕ— ತಾಯಿ, ಪುಣ್ಯಾತ್ಮರಾದ ನಿಮಗೆ ಹೊಟ್ಟೆಗಿಲ್ಲವೇ ? ಹಾಗನ್ನಬಾರದು. ದರಿದ್ರನಾಗಿ ಈ ಸ್ಥಾನಕ್ಕೆ ಬಂದಿರುವೆನು. ನೀಡಿ ಪುಣ್ಯವನ್ನು ಕಟ್ಟಿಕೊಳ್ಳಿರಿ.

ನಾಗಮ್ಮ— ಎಷ್ಟು ಮಾತನಾಡುವಿಯೋ ? ಸುಮ್ಮನೇ ಹೋಗುವಿಯೋ ಇಲ್ಲವೋ ?

ತಿರುಕ— ಅವ್ವಾ, ರೊಟ್ಟಿಯನ್ನು ತಂದು ನೀಡಿದ ನಮ್ಮ ಅವ್ವನು ಪಲ್ಲೆಯನ್ನು ನೀಡುವದಿಲ್ಲೆಂದು ಹೇಳಿದರೆ ನಾನೇ ಹೊರಟುಹೋಗುವೆನು. ನೀನು ಏತಕ್ಕೆ ಸುಮ್ಮನೆ ಕೋಪವನ್ನು ಮಾಡುವಿಯಮ್ಮಾ ?

ಮಲ್ಲಮ್ಮ— ಅಕ್ಕಾ, ಯಾಚಕರ ಮೇಲೆ ಕೋಪವನ್ನು ಮಾಡಿ ಪ್ರಯೋಜನವೇನು? ಅವರಿಗೆ ಹಾಕುವಷ್ಟು ಅನ್ನವು ನಮ್ಮ ಮ ಯಲ್ಲಿ ಬಾನಿಗೆ ಬಿಧ್ದು ಹೋಗುವದು. ಇಗೋ ಯಾಚಕನೇ ಪಲ್ಲೆಯ ನೀಡುವೆನು ತೆಗೆದುಕೋ.

ತಿರುಕ— ಅವ್ವಾ ನಿನ್ನ ಹೆಸರೇನು ತಾಯೀ?

ಲಿಂಗಮ್ಮ— ಎಲೋ ಅವಳ ಹೆಸರು ಮಲ್ಲವ್ವ – ಮಲ್ಲವ್ವ.

ತಿರುಕ— ಮಲ್ಲವ್ವ, ತಾಯಿ ನೀನು ಇದ್ದ ಮನೆಯು ಉದ್ಧಾರವಾ ನೀನು ಬಿಟ್ಟು ಹೋದ ಮನೆಯು ಸ್ಮಶಾನವಾಗಲಿ. ಸೌಖ್ಯವಾಗಿ ತಾಯಿ, ನಾನು ಹೋಗುವೆನು.

( ನಂಬರ ೬ ) ಪದ.

ನಿನಗೆ ನಾನು ಸೌಖ್ಯವನಿತ್ತೆ | ಹೀನ ವಿಧಿಯು ಕಷ್ಟವನ್ನಿತ್ತ
ಮನವು ಶಾಂತಿ ಇಲ್ಲದೆ ಮೋಕ್ಷ | ತಾನೆ
ದೊರೆವುದೇನವ್ವಾ ||೧||

( ಹೋಗುವನು

ಮಲ್ಲಮ್ಮ— ಇದೇನು? ಯಾಚಕನಿಗೆ ನಾನು ಅನ್ನವನ್ನು ನೀಡಿ ವದರೊಳಗಾಗಿ ಗಡಿಗೆಗಳೆಲ್ಲಾ ಒಡೆದಿರುವವಲ್ಲಾ. ಶಿವಶಿ ಮಲ್ಲಿಕಾರ್ಜುನ ಈದಿನ ವ್ಯಾಳ್ಯೆವಾಗಿರುವದೊಂದು ಕಷ್ಟ, ಅಕ್ಕಂ ನನ್ನ ಮೇಲೆ ಅನ್ಯಾಯವಾಗಿ ಸಿಟ್ಟಿಗೆದ್ದಿರುವದೊಂದು ಕಷ್ಟ, ಮಾಡಲಿ? ಯತ್ನವಿಲ್ಲ. ದೇವಾ ಮಲ್ಲಿಕಾರ್ಜುನ, ನೀನೇ ನನ್ನ ಕಾಪಾಡು!

ಪದ್ಮಮ್ಮ— ಮಲ್ಲವ್ವಾ, ಇದು ವರೆಗೂ ಏನು ಮಾಡಿದೆ? ಒಕ್ಕಲಿ ಮನೆಯಲ್ಲಿ ಮುಂಚಿತವಾಗಿಯೇ ಅಡಿಗೆಯಾದರೆ ಅವರ ಬ ಬಾಳ್ವೆ ನಡೆಯುವದು. ನೀನು ಆಚಾರವಂತರ ಮನೆಯಲ್ಲಿ ಹ ದವಳು. ಸ್ನಾನಾ ಗೀನಾ ಮಾಡಿ ಮಡಿ-ಪಡಿ ಉಟ್ಟುಕೊಳ್ ಷ್ಟರಲ್ಲಿ ಬದಕು ಬಾಳ್ವೆ ಕೆಟ್ಟು ಹೋಗುವದು.

ಮಲ್ಲಮ್ಮ— ಅತ್ತಿಯವರೇ, ಈದಿನ ನನ್ನಮೇಲೆ ಏಕೋ ದೇವರು ಕೋಪಗೊಂಡಿರುವಂತೆ ಕಾಣುವದು. ಪಾಕವು ಸಿದ್ಧವಾಗಿತ್ತು. ನಂತರ ಪಾಕದ ಗಡಿಗೆಗಳು ತಮ್ಮಷ್ಟಕ್ಕೆ ತಾವೇ ಒಡೆದಿರುವವು. ಕಾರಣ ತಡವಾಯಿತು. ಅಪರಾಧವಾಗಿದ್ದರೆ ಕ್ಷಮಿಸಬೇಕೆಂದು ಬೇಡಿಕೊಳ್ಳುವೆನು.

( ನಂಬರ ೭ ) ಪದ ರಾಗ- ಬಿಹಾರ ತಾಲ- ಕೇರವ

ಪದ್ಮಮ್ಮ— ಥೂ ವಚನ ಹೀನಾಬಲೇ | ಯುವತಿ ಮಾನಮರುಳೇ ||
ವೀರವಂಶದವಳಲ್ಲ ನೀನುದು | ಷ್ಕಾರ್ಯವಗೈಯ್ಯುವ
ದ್ವಯ ತರುಣೀ ಪರಿಯಾಲೋಚಿಸಲೆನಗೆ ತೋರುವಿ ||೧||

ಮಲ್ಲಮ್ಮ, ಗಡಿಗೆಗಳು ತಮ್ಮಷ್ಟಕ್ಕೆ ತಾವೇ ʼಒಡದಿರುವವೆಂದು ಹೇಳುವಿಯಲ್ಲ. ಆ ಗಡಿಗೆಗಳಿಗೇನಾದರೂ ಕೈಗಳುಂಟೋ ?

ನಾಗಮ್ಮ— ಅತ್ತಿಯವರೇ, ಈ ಮಲ್ಲಮ್ಮನ ಮಾತು ಕೇಳಲಿಕ್ಕೆ ಬಹಳ ವಿನೋದವಾಗಿರುವದು. ಯಾವನೋ ಒಬ್ಬ ತಿರುಕನು ಬಂದಿದ್ದನು ಅವನಿಗೆ ಅನ್ನವನ್ನು ನೀಡುವದಕ್ಕೆ ಹೋಗಿ ತಡಹಾದು ಒಡದು ಬಂದದ್ದನ್ನು ನಾವು ಕಣ್ಣಾರೆ ಕಂಡೆವು. ಬೇಕಾದರೆ ಲಿಂಗಮ್ಮನನ್ನು ಕೇಳಿರಿ. ನಿಶ್ಚಯವಾದ ಸಂಗತಿಯು ತಿಳಿಯುವದು.

ಲಿಂಗಮ್ಮ— ಅಹುದು ; ಅಹುದು ; ಅತ್ತಿಯವರೇ, ಅಕ್ಕನು ಹೇಳುವದೆಲ್ಲ ನಿಜ. ಮಲ್ಲವ್ವ, ನೀನು ಆ ತಿರುಕನಿಗೆ ಒಳಗಿನಿಂದ ಪಲ್ಲೆಯನ್ನು ತಂದು ನೀಡಲಿಲ್ಲವೇ ? ಆ ಕಾಲದಲ್ಲಿ ಗಡಿಗೆಯು ತಾಕಿ ಒಡೆಯಿತೆಂದು ನೀನೇ ಹೇಳಲಿಲ್ಲವೇ ?

ಮಲ್ಲಮ್ಮ— ಅಕ್ಕಾ, ನಿಜವೆಂದು ನೀವೇ ಹೇಳುತ್ತಿರುವಲ್ಲಿ ನಾನು ಮಾಡುವದಾದರೂ ಏನು ?

ಪದ್ಮಮ್ಮ— ತಿಳಿಯಿತು. ಈ ಕೆಲಸಕ್ಕೆ ನೀನು ಸಲ್ಲದವಳು. ನಮ್ಮ ಮನೆಯಲ್ಲಿ ವರುಷಕ್ಕೊಂದು ಸಾರೆ ಗಡಿಗೆಗಳನ್ನು ಕೊಳ್ಳತಕ್ಕ ಪದ್ಧತಿ ಇರುವದು. ಹೀಗಾದಮೇಲೆ ದಿನಕ್ಕೊಮ್ಮೆ ಕೊಂಡು ಕೊಳ್ಳುವ ಪ್ರಸಂಗವು ಬರಬಹುದು. ಸಾಕು. ನೀನು ಬಾಳ್ವೆ

ಮಾಡತಕ್ಕವಳಲ್ಲ. ಇನ್ನು ಒಳಗಿನ ಕೆಲಸಕ್ಕೆ ನೀನು ಹೋಗಬೇ
ನಮ್ಮ ಮನೆಗೆ ನಿತ್ಯದಲ್ಲಿಯೂ ಐದು ಗಿದ್ನ ಜೋಳದ ಹಿ
ಬೇಕಾಗುವದು. ಕಾರಣ ನೀನು ಬೀಸುವ ಕೆಲಸವನ್ನು ಮಾ
ಪ್ಯಾಳ್ಯಕ್ಕೆ ಸರಿಯಾಗಿ ಹಿಟ್ಟನ್ನು ಕೊಡು. ಅಡಿಗೆ ಮನೆಯ
ಬಿಟ್ಟು ಬೀಸುವಕಲ್ಲಿಗೆ ಬಾ !

( ನಂಬರ ೮ ) ಪದ, ರಾಗ. ಫೀಲ್ ತಾಲ-

**ನಾಗಮ್ಮ, ಲಿಂಗಮ್ಮ—** ಮಾನಹೀನಗೈದವೀಗಾ | ಮಾನಿನಿ ಮಲ್ಲ
ನಿಗೆ || ದಾನಿಯಂಬೋ | ಪ್ರೇಮನುಡಿಯಾ | ತಾನೆಗ
ಪೋಯ್ತಿ | ಮನದೊಳತ್ತಿ ವಿನಯ ತೋರೆದು | ಮಾನಿನೀ
ನುತಾನು ||೧||

**ಲಿಂಗಮ್ಮ—** ಅಕ್ಕಾ, ನಾವು ಹೀಗೆ ಮಾಡಿದ್ದು ಒಳ್ಳೇದಾಯಿತ
ಅತ್ತಿಯುವರಾದರೂ ನಮ್ಮ ಮಾತಿಗೆ ಲಕ್ಷ್ಯವಿಟ್ಟು ಅವಳಿಗೆ
ಕೆಲಸವನ್ನೇ ನೇಮಿಸಿದರು. ಆ ಕೆಲಸದಲ್ಲಿ ಅವಳಿಗೆ ತೊಂ
ಕೊಟ್ಟರೆ ಮನೆಯಿಂದ ಬಿಡುಗಡೆಯೇ ಆಗುವಳು. ಅಷ್ಟು ಮಾ
ದರೆ ನಮ್ಮ ಕುಟಿಲತ್ವವು ಸಾರ್ಥಕವಾಗುವದು. ಅದಕ್ಕೆ
ಆಲೋಚನೆ ಮಾಡಲು ಹೋಗುವಾ ನಡೆ. ( ಹೋಗುವರು

( ಈಶ್ವರ ಪ್ರವೇಶ.)

( ನಂಬರ ೯ ) ಪದ ರಾಗ-ಭೂಪ ತಾಲ-ದಾ

ಧರಣಿಯೊಳು ಚೋದ್ಯವಹಾ | ನಾರೀವಿಮಲಭ
ಯುತಾ | ತರುಣಿ ಮಲ್ಲಮಾಂಬೆಯೊಳಾ | ವರಭ
ನೆಲಿಸಿರ್ದುದು || ತಿರುಕನ ವೇಷದೊಳು ನಾನು | ಚರಿ
ತತ್ಕಾಲದಲ್ಲಿ ! ತೋರಿತ ಮನುಭಕ್ತಿಯು ತಾ | ವೇಮ
ಮಲ್ಲಮ್ಮನೊಳು ||೧||

ಅಹಾ ! ನಾನು ಮಲ್ಲಮ್ಮನ ಭಕ್ತಿಯನ್ನು ಪರೀಕ್ಷೆಮಾಡಬೇಕೆಂ
ಕೇಳಿದಾಕ್ಷಣವೇ ಅತ್ತಿಯುಮನೆ ಸೊಸಿಯಾದ ಮಲ್ಲಮ್ಮನು ಯಾಚ

ಧ್ವನಿಯು ತನ್ನ ಕರ್ಣಕ್ಕೆ ಬಿದ್ದಾಕ್ಷಣವೇ ನನಗೆ ರೊಟ್ಟಿಯನ್ನು ತಂದು ಹಾಕಿದಳಲ್ಲಾ! ಆಕಿಯ ಭಕ್ತಿಯು ಅತ್ಯಂತ ಸ್ತುತ್ಯವಾದದ್ದು. ಇಂಥ ಭಕ್ತಿವಂತಳಿಗೆ ನೀಚ ಹೃದಯರಾದ ನಗೆವಣ್ಣಿಯರು ನನ್ನ ಎದುರಿಗೆ ದೋಷಗಳನ್ನು ಕಲ್ಪಿಸುತ್ತಿರುವರಲ್ಲಾ? ಅತ್ತಿಯವರಾದರೂ ಹಿರೇ ಸೊಸೆಯರ ಮಾತಿಗೆ ಕಿವಿಗೊಟ್ಟು ಮುಗ್ಧಳಾದ ಮಲ್ಲಾಂಬೆಗೆ ಎಂಥ ಕಠಿಣ ಕಾರ್ಯವನ್ನು ನೇಮಿಸಿದಳು. ಪ್ರತಿನಿತ್ಯದಲ್ಲಿಯೂ ಓರ್ವಳೆ ಐದು ಗಿದ್ನ ಜೋಳವನ್ನು ಬೀಸುವದು ಸಾಧ್ಯವೆ? ಕಾರಣ ಈದಿನ ನಾನೇ ಹೋಗಿ ಆ ಜೋಳವನ್ನು ಬೀಸಿ, ನನ್ನ ಭಕ್ತಳ ಕಷ್ಟವನ್ನು ಪರಿಹರಿಸುವೆನು. (ಹೋಗುವನು)

ಮಲ್ಲಮ್ಮ— (ಬೀಸುವ ಕಲ್ಲಿನ ಮುಂದೆ) ಅಹಾ! ನನ್ನ ಅಕ್ಕಂದಿರರು ನನಗೆ ಮಹಾ ಉಪಕಾರವನ್ನು ಮಾಡಿದರು. ಕರ್ಮವೆಂಬ ಧಾನ್ಯವನ್ನು ಧರ್ಮವೆಂಬ ಕಲ್ಲಿನಿಂದ ಬೀಸಿ ಪಾಪವೆಂಬ ಹಿಟ್ಟನ್ನು ಸುಟ್ಟು ಜ್ಞಾನವೆಂಬ ಪಾಕವನ್ನು ಮಾಡಿ ಮೋಕ್ಷವನ್ನು ಪಡೆಯೆಂದು ಮೋಕ್ಷದ ಮಾರ್ಗವನ್ನು ತೋರಿಸಿದ ಆ ನನ್ನ ಅತ್ತಿಯವರನ್ನು ಎಂದಿಗೂ ಮರೆಯಲಾರೆನು. ಇದೆಲ್ಲ ಆ ಮಲ್ಲಿಕಾರ್ಜುನನ ಮಹತ್ವವಲ್ಲದೆ ಬೇರೆ ಅಲ್ಲ. ಭವತು. ಆತನ ನಾಮವನ್ನು ರಾಗರೂಪದಿಂದ ಹಾಡುತ್ತ ಧಾನ್ಯವನ್ನು ಬೀಸುವೆನು.

ನಂಬರ ೧೦) ಪದ ರಾಗ– ಭೀಮಪ್ಲಾಸ ತಾಲ– ಕೇರವ

ಎಂಥವನೇ ಗುರುರಾಯಾ | ಶಾಂತಿ ಸದ್ಗುಣ ನಿಲಯಾ ||
ಕುಂತಲ್ಲೆ ಭ್ರಾಂತಿಯು ಬಿಡಿಸುವ ತಾನು ||೧||

ವೀರಶೈವರಿಗೆಲ್ಲ | ತೋರುವ ಶಿವ ತಾನು ||
ನಾರಿಯರೆಲ್ಲರೂ ನೋಡುವ ಬನ್ನೀ ||೨||

ಎಂದು ಕಾಣುವೆನವ್ವಾ | ತಂದೆ ಶ್ರೀ ಶಿವನನ್ನು ||
ಬಂದಂಥ ಬಂಧನ ಬಿಡಿಸುವ ತಾನು ||೩||

ಬಡವರಿಗೆ ಭಾಗ್ಯವಾ | ಬೇಡಲು ಆ ಶಿವನು ||
ತಡಮಾಡದೆ ತಾ | ಕೊಡುವನು ಭಾಗ್ಯವಾ ||೪||

ಅಹಾ ! ಈ ದಿವಸ ನಿದ್ರೆಯು ಏಕೋ ಬಹಳವಾಗಿ ಬಂದಿರುವ
ಸ್ವಲ್ಪ ಹೊತ್ತು ನಿದ್ರೆಯನ್ನು ಮಾಡಿ ಆನಂತರ ಬೀಸುವೆನು.

(ಮಲಗುವ

( ಈಶ್ವರನ ಪ್ರವೇಶ )

**ಈಶ್ವರ—** ಅಹಾ ! ಶಿವಶರಣಿಯಾದ ಮಲ್ಲಮ್ಮನು ಬೀಸಿ ಬೀಸಿ ಬೇಸ
ಕೆಲವು ಧಾನ್ಯವನ್ನು ಹಾಗೆಯೇ ಉಳಿಸಿ ನಿದ್ರಿಸುತ್ತಿರುವಳು. ಅ
ಆ ನೀಚ ಸ್ತ್ರೀಯರು ಮಲ್ಲಮ್ಮನನ್ನು ಕಠಿಣವಾದ ಕಾರ್ಯಕ್ಕೆ
ಮಾಡಿ ತಾವು ವಿನೋದದಿಂದ ಅಡಿಗೆಯನ್ನು ಮಾಡುತ್ತಿರುವ
ಆಗಲಿ. ಇವರಿಗೆ ಮಾತ್ರ ಅದೃಶ್ಯನಾಗಿ ಈ ಧಾನ್ಯವನ್ನೆಲ್ಲ
ಹೋಗುವೆನು.

( ನಂಬರ ೧೧ ) ಪ ದ .

ಬೀಸುವೆ ನಾ ಮಲ್ಲಮ್ಮಾ | ಬೇಸರಬೇಡ ಬಿಡು ತಾಯಿ |
ಮಾಸಿದ ವಸ್ತ್ರ ಧರಿಸುತ ಬಂದೆನು ||
ಐದು ಗಿದ್ದನ ಜೋಳ | ಐದು ಘಳಿಗೆಗೆ ಬೀಸುವೆ ನಾ |
ಐದು ಮುತ್ತೈದಿಯು ಬಿಡು ಬಿಡು ವ್ಯಸನವ |
ನೋಡುತ ಧಾನ್ಯವನು | ಮಾಡುವಿ ಧ್ಯಾನವನು |
ನೋಡಿ ನಾ ಕಷ್ಟವ ಓಡುತ ಬಂದೆನು |
ಎಲ್ಲೆಲ್ಲಿ ನೋಡಿದರೂ | ಅಲ್ಲಲ್ಲಿ ಇರುವೆನು ನಾ |
ಮಲ್ಲಮ್ಮನಂಥವಳೆಲ್ಲಿಯು ಕಾಣೆನು |

ಧಾನ್ಯವನ್ನು ಮಾತ್ರ ಪೂರೈಸಿದಂತಾಯಿತು. ಮಲ್ಲಮ್ಮನಿಗೆ ಎ
ನಾಗುವಂತೆ ಭಾಸವಾಗುವದು. ಜಾಗ್ರತೆಯಾಗಿ ಅದೃಶ್ಯ
ಪುನಃ ಜಂಗಮ ರೂಪದಿಂದ ಬರುವೆನು. ( ಅದೃ

**ಮಲ್ಲಮ್ಮ—** ಅಹಾ ! ಇದೇನು ? ನಾನು ನಿದ್ರೆಯಿಂದ ಏಳುವದರ
ಗಾಗಿ ಧಾನ್ಯವನ್ನೆಲ್ಲ ಬೀಸಿರುವರಲ್ಲ. ಏನಾಶ್ಚರ್ಯವಿದು ?

( ನಾಗಮ್ಮ – ಲಿಂಗಮ್ಮ ಬರುವರು )

ಲಿಂಗಮ್ಮ— ಮಲ್ಲವ್ವಾ, ನೀನು ಬೀಸಿ ಹಿಟ್ಟು ಕೊಟ್ಟಮೇಲೆ ನಾವು ಅಡಿಗೆ ಮಾಡಬೇಕಾಗುವದು. ನೀನು ಇದುವರೆಗೂ ಕೊಡಲಿಲ್ಲ. ಅಂದಮೇಲೆ ನಾವು ಇನ್ನು ಯಾವಾಗ ಪಾಕ ಮಾಡಬೇಕು. ಅತ್ತಿಯವರು ಬಂದರೆ ನಿನಗಾಗುವ ಶಿಕ್ಷೆ ನಮಗಾದೀತು. ಜಾಗ್ರತೆ ಹಿಟ್ಟನ್ನು ತೆಗೆದುಕೊಂಡು ಬಾ.

ಮಲ್ಲಮ್ಮ — ಅಕ್ಕಾ, ಒಳಗೆ ಬರಬೇಡವೆಂದು ನನಗೆ ಅತ್ತೆಯವರು ಆಜ್ಞೆಯನ್ನು ಮಾಡಿರುವರು. ಅವರ ಆಜ್ಞೆಯನ್ನು ನಾನು ಹೇಗೆ ಮೀರಿ ನಡೆಯಲಿ? ಹಿಟ್ಟು ಎಲ್ಲಾ ಸಿದ್ಧವಾಗಿರುವದು. ನೀವೇ ಬಂದು ಹಿಟ್ಟನ್ನು ತೆಗೆದುಕೊಂಡು ಹೋಗಿರಿ.

ನಾಗಮ್ಮ — ತಂಗೀ, ಇವಳ ಮಾತನ್ನು ಕೇಳಿದಿಯಾ? ಈ ಗಯ್ಯಾಳಿಯು ಹೀಗೆಲ್ಲ ಮಾಡಿ ನಮ್ಮನ್ನು ಅಪರಾಧಕ್ಕೆ ಸಿಲ್ಕಿಸಬೇಕೆಂದು ಮಾಡಿರುವಳು. ಹಿಟ್ಟನ್ನು ಕೇಳಿದರೆ ಕೊಡುವದಿಲ್ಲೆಂದು ಹೇಳುತ್ತಿರುವಳು. ಕೇಳಿದಿಯಾ ? ಅತ್ತೆಯುವರ ಎದುರಿಗೆ ಹೀಗೇ ಹೇಳಬೇಕು ನೋಡು !

ಮಲ್ಲಮ್ಮ— ಅವ್ವಾ ಪುಣ್ಯಾತ್ಮರೇ, ಹಿಂದು ಹೇಳಿದವರೂ ನೀವೇ. ಈಗ ಹೇಳುವವರೂ ನೀವೇ. ನಿಮ್ಮ ಹೇಳಿಕೆಯಿಂದ ಬಂದ ಕಷ್ಟಗಳು ಬರಲಿ. ಅತ್ತೆಯುವರ ಆಜ್ಞೆಯನ್ನು ಧಿಕ್ಕಾರ ಮಾಡಲಾರೆ. ಅಪವಾದ ಹೊರಿಸಿದವರನ್ನು ಬಹಿಷ್ಕರಿಸಲಾರೆ. ನಾನು ನಿಮ್ಮ ದಾಸಳು. ನೀವು ನನ್ನ ಪ್ರಭುಗಳು. ಪ್ರಭುತ್ವವು ಶ್ರೇಷ್ಠವಾಗುವದಲ್ಲದೆ ದಾಸತ್ವವು ಶ್ರೇಷ್ಠವಾಗಲಾರದು. ಕಾರಣ ನೀವೇ ಬಂದು ಈ ಹಿಟ್ಟನ್ನು ತೆಗೆದುಕೊಂಡು ಹೋಗುವದೇ ನ್ಯಾಯವು!

ನಾಗಮ್ಮ— ಎಲೇ ಮೂರ್ಖಳೇ, ನ್ಯಾಯ – ಅನ್ಯಾಯ ಈಗ ತಿಳಿಯುವದಿಲ್ಲ. ನ್ಯಾಯಾಧಿಕಾರಿಗಳು ಬಂದಮೇಲೆ ತಾನೇ ತಿಳಿಯುವದು.

( ಈಶ್ವರನು ಜಂಗಮರೂಪದಿಂದ ಪ್ರವೇಶ ಮಾಡುವನು. )

( ನಂಬರ ೧೨ ) ಪದ ರಾಗ- ಭೈರವಿ ತಾಲ- ಕೇ

ನಾನೇ ಬೇಡುವೆ ಭಿಕ್ಷೆಯ ನೀಡಿ | ಮಾನವಂತರು ನೀವು |
ದೀನ ಜಂಗಮನಿಗೆ ||
ಶಿವ ಶಿವಾ ಕಂತೇ ಭಿಕ್ಷ | ಶಿವ ಶಿವಾ ತಂತೇ ಭಿಕ್ಷ |
ಶಿವನ ಭಕ್ತರವರಾ | ಯುವತಿಯರೆಲ್ಲ ನೀವು ||

ಶಿವ ಶಿವ ಭವತಿ ಭಿಕ್ಷಾಂದೇಹಿ !

**ನಾಗಮ್ಮ**— ಅಯ್ಯನವರೇ, ನೀವು ಬಾಳ್ವೆ ಬದಕು ಮಾಡಿದವರಾಗಿ ಈ ವ್ಯಾಳ್ಯದಲ್ಲಿ ನೀವು ಭಿಕ್ಷೆಗೆ ಬರುತ್ತಿದ್ದಿಲ್ಲ. ಈ ನಮ್ಮ ಮ ಯಲ್ಲಿ ಇನ್ನೂ ಆಳುಗಳಿಗೆ ಸಹಾ ಅನ್ನವನ್ನು ಹಾಕಿಲ್ಲಾ. ಹೋ ಹೋಗು ಮುಂದಕ್ಕೆ ಹೋಗು.

**ಜಂಗಮ**— ಅವ್ವಾ, ನಿಮ್ಮ ಮನೆಯ ಆಳುಗಳಿಗೆ ಅನ್ನವನ್ನು ಹಾಕ ಇರುವದರಿಂದ ನೀವು ಮಾಡಿಟ್ಟ ಅಡಿಗೆಯು ಮೊಸಲಾಗಿರು ದೆಂದು ಹೇಳುತ್ತಿರುವಿಯಾ ? ತಾಯೀ ಹಾಗಾದರೆ ಮೊಸಲ ಅ ಗೆಯನ್ನು ನನಗೆ ಎಡಿ ಮಾಡಬೇಡ. ನಿನ್ನೆ ಮಾಡಿದ ರೊ ಚೂರು ಇದ್ದರೆ ಎಡಿ ಮಾಡು.

**ಲಿಂಗಮ್ಮ**— ನಿನಗೆ ಬುದ್ಧಿ ಸಾಲದಾಗಿ ಕಾಣುತ್ತದೆ. ಯಾ ಉಣ್ಣುವದಕ್ಕಿಂತ ಮೊದಲು ಈತಗೆ ಎಡಿಮಾಡಬೇಕಂತೆ ? ಎಡಿ ಗುಜುಗುಟ್ಟಬೇಡ ಸುಮ್ಮನೇ ಹೋಗು.

**ಜಂಗಮ**— ಆಹಾ ! ಯಾರೂ ಉಣ್ಣುವದಕ್ಕಿಂತ ಮೊದಲು ಜಂಗ ರಿಗೆ ನೀಡುವದಿಲ್ಲೆಂಬ ಹೊಸ ಭಕ್ತರನ್ನು ಈ ಹೇಮರಡ್ಡಿಯ ಮ ಯಲ್ಲಿ ಕಂಡಂತಾಯಿತು. ಕಲಿಯುಗದಲ್ಲಿ ಹೊಸ ಹೊಸ ಪದ್ಧ ಗಳು ಉತ್ಪನ್ನವಾಗುತ್ತಿರುವವೆಂಬುದಕ್ಕೆ ಈ ಸ್ತ್ರೀಯರೇ ಸಾ ಯಾದರು. ಅಲ್ಲಿ ನಿಂತಿರುವ ಮಹಾತ್ಮಳು ಕೇವಲ ತಪಸ್ವಿನಿಯ ಕಾಣುತ್ತಿರುವಳು. ಆ ಮಹಾತ್ಮಳನ್ನು ಬೇಡುವೆನು.

( ನಂಬರ ೧೩ ) ಪದ.

ಕುಕ್ಷಿಯ ಹಸುವಿಗೆ | ಭಿಕ್ಷುಕನಿಗೆ ನೀವ್ ತಕ್ಷಣ ನೀಡಿರಿ ||೧||

ಶಿವ ಶಿವಾ ಭಿಕ್ಷಾಂದೇಹಿ ಭವತಿ ಭಿಕ್ಷಾಂದೇಹಿ.

ಮಲ್ಲಮ್ಮ— ಶಿವಶಿವಾ, ಕೇವಲ ಶಿವಲಾಂಛನಧಾರಿಯಾದ ಜಂಗಮ ಮೂರ್ತಿಯು ಕಂತೇ ಭಿಕ್ಷಕ್ಕಾಗಿ ದಯಮಾಡಿಸಿರುವನು. ಎಡೆ ಮಾಡಬೇಕೆಂದರೆ ಒಳಗೆ ಹೋಗಲಿಕ್ಕೆ ನನಗೆ ಸ್ವಾತಂತ್ರ್ಯವಿಲ್ಲ. ಏನು ಮಾಡಲಿ? ಗುರುವೇ ನನ್ನಲ್ಲಿ ಧಾನ್ಯವು ಮಾತ್ರ ಇರುವದು. ಅಪ್ಪಣೆಯಾದರೆ ಧಾನ್ಯವನ್ನು ನೀಡುವೆನು.

ಜಂಗಮ— ಅಹಾ! ಈ ಶಿವಶರಣೆಯ ವಾಕ್ಯವನ್ನು ಕೇಳಿದರೆ ಪರಮ ಸಂತೋಷವಾಗುತ್ತಿರುವದು. ಅತ್ತೆಯ ಆಜ್ಞೆಯನ್ನು ಮೀರಿ ನಾನು ಒಳಗೆ ಹೋಗಲಾರೆ ಧಾನ್ಯವನ್ನು ನೀಡುವೆನೆಂದು ಹೇಳುತ್ತಿರುವಳು. ಆಗಲಿ ಹಾಗೆಯೇ ಮಾಡುವೆನು, ಶಿವ ಶಿವಾ ಗುರುವಿನ ಧರ್ಮ ಕೋರಧಾನ್ಯದ ಭಿಕ್ಷ, ಭವತಿ ಭಿಕ್ಷಾಂದೇಹಿ.

( ಧಾನ್ಯ ನೀಡುವಳು. )

ತಾಯಿ, ಧಾನ್ಯವನ್ನು ಮಾತ್ರ ನೀಡಿದಿ. ಇವರಿಂದ ನನ್ನ ಹೊಟ್ಟೆಯ ಹಸಿವು ಯಾವ ರೀತಿಯಿಂದ ಅಡಗಬೇಕು ?

ಮಲ್ಲಮ್ಮ— ಸ್ವಾಮಿ, ನಾನು ಈ ಮನೆಯ ಮಧ್ಯ ಸೊಸೆಯು. ನನ್ನ ಅತ್ತೆಯವರು ಯಾವದೋ ಒಂದು ಕಾರಣದಿಂದ ಅಡಿಗೆಯ ಮನೆಯೊಳಗೆ ಹೋಗುವ ಅಧಿಕಾರವನ್ನು ತಪ್ಪಿಸಿ ಬೀಸುವ ಕಾರ್ಯಕ್ಕೆ ನೇಮಿಸಿರುವರು. ಹೀಗಿರುವದರಿಂದ ನನ್ನನ್ನು ಪದೆ-ಪದೆ ಪರೀಕ್ಷೆ ಮಾಡಬಾರದೆಂದು ಬೇಡಿಕೊಳ್ಳುವೆನು.

ಜಂಗಮ— ಅಹಾ ! ಈ ಭಕ್ತಳ ಮನಸ್ಸನ್ನು ನಾನು ನೋಯಿಸಿದ್ದಾದರೆ ನನಗೆ ನಿಶ್ಚಯವಾಗಿ ಭಕ್ತದ್ರೋಹ ಬರುವದು. ಕಾರಣ ಆ ಹಿಟ್ಟನ್ನೇ ನೀಡಿಸಿಕೊಂಡು ಇಲ್ಲದಂತೆ ಮಾಡಿದರೆ ಈ ನೀಚ ಸ್ತ್ರೀಯರಿಂದ ಪುನಃ ಮಲ್ಲಮ್ಮನು ಕಷ್ಟಕ್ಕೆ ಗುರಿಯಾಗುವಳು. ಹಾಗಾದರೆ ಈ

ಮಹಾತ್ಮಳ ಮನಸ್ಸಿನ ನಿಜವಾದ ತತ್ವವು ತಿಳಿಯುವದು. ಅಷ್ಟು ಹಿಟ್ಟಿನಿಂದಲೇ ಸಕಲ ಆಹಾರವು ಆಗುವದು. ಆದ್ದರಿಂದ ಅ ನೀಡು ಹೊರಟು ಹೋಗುವೆನು.

(ನೀಡುವ

**ಜಂಗಮ—** ಅಮ್ಮಾ, ಸಿದ್ಧಾಪುರದಲ್ಲಿರುವ ಶಿವಭಕ್ತರು ತಾವು ಮಾಡದೆ ತಮ್ಮ ಮನೆಯ ಆಳುಗಳೂ ಕೂಡಾ ಊಟವ ಜಂಗಮರಿಗೆ ನೀಡಬಾರದೆಂದು ಒಂದು ದೊಡ್ಡ ಕಟ್ಟಳೆಯ ಮಾಡಿಕೊಂಡಿರುವರಂತೆ. ಈ ಕಟ್ಟಳೆಯನ್ನು ಮೀರಿ ನಡೆದ ಶಿವಭಕ್ತರ ಗುಂಪಿನಿಂದ ಬಹಿಷ್ಕಾರ ಕೊಡಿಸುವರಂತೆ. ಹೀ ಯಾವದೊಂದು ವಿಚಾರ ಮಾಡದೆ ನನಗೆ ನೀನು ಭಿಕ್ಷೆಯ ನೀಡಿದಿ. ಅಂದಮೇಲೆ ಈ ಸಿದ್ಧಾಪುರದ ಶಿವಭಕ್ತರು ನಿನಗೆ ಷ್ಕಾರ ಕೊಡಬಹುದು. ಇದಕ್ಕೇನು ಮಾಡುವಿ ?

**ಮಲ್ಲಮ್ಮ—** ಸ್ವಾಮಿ, ಒಳಗೂ ಹೊರಗೂ ಇರುವ ಮೂರ್ತಿ ನೀನಲ್ಲವೇ ? ಅನ್ಯಾಯವಾದ ಸಿದ್ಧಾಪುರದ ಶಿವಭಕ್ತರ ಬಹಿಷ್ಕಾ ಭಯಪಟ್ಟು ನಿಮ್ಮಂಥ ಜಂಗಮ ಮೂರ್ತಿಗಳನ್ನು ಧಿಕ್ಕಾರ ಮಾ ವದು ಯೋಗ್ಯವಾಗುವದೇ ?

**ಜಂಗಮ—** ಅಮ್ಮಾ, ನೀನು ಕೊಟ್ಟಿರುವ ಹಿಟ್ಟಿನಿಂದ ಪಾಕ ಮಾಡಿಕೊಂಡು ತೃಪ್ತನಾಗಲು ಹೋಗುವೆನು. ಸೌಖ್ಯವಾಗಿರು

(ಹೋಗುವ

**ಮಲ್ಲಮ್ಮ—** ಆಹಾ ! ಈಗ ಇಲ್ಲಿ ಇದ್ದ ಧಾನ್ಯವು ಹಿಟ್ಟು ಸಹ ಸ್ವ ದರೂ ಕಾಣಿಸುವದಿಲ್ಲ. ಈಗ ಬಂದ ಜಂಗಮ ಮೂರ್ತಿ ಸಾಕ್ಷಾತ್ ಪರಮಾತ್ಮನಾಗಿರಬಹುದೆಂದು ಭಾಸವಾಗುತ್ತದೆ. ಇದೆಲ್ಲವೂ ಪರಮಾತ್ಮನ ಲೀಲೆಯಲ್ಲದೆ ಬೇರೊಂದಲ್ಲ !

**ಪದ್ಮಮ್ಮ—** ನಾಗಮ್ಮ, ಪಾಕವು ಸಿದ್ಧವಾಗಿರುವದೇ ? ಭರಮ ವೇಮರಡ್ಡಿಯವರು ಬರುವ ವ್ಯಾಳ್ಯೆವಾಯಿತು. ಯಜಮಾ ಕೂಡ ಬರಬಹುದು.

ನಾಗಮ್ಮ— ಅತ್ತಿಯವರೇ, ಈ ಮಲ್ಲಮ್ಮನು ಬೀಸಿದ ಹಿಟ್ಟನ್ನು ಕೊಡದೆ ಹಟವನ್ನು ಮಾಡಿಕೊಂಡು ಕುಳಿತಿರುವಳು. ನಾನೇನು ಮಾಡಲಿ ?

ಪದ್ಮಮ್ಮ— ಮಲ್ಲವ್ವ, ಹಿಟ್ಟನ್ನು ಏಕೆ ಕೊಡಲಿಲ್ಲ ?

ಮಲ್ಲಮ್ಮ— ಅತ್ತಿಯವರೇ, ಒಳಗೆ ಹೋಗಬೇಡವೆಂದು ನೀವು ನನಗೆ ಆಜ್ಞೆಯನ್ನು ಮಾಡಿದ್ದಿರಿ. ನಿಮ್ಮ ಆಜ್ಞೆಯನ್ನು ಮೀರಲಾರದೆ ಈ ಅಕ್ಕಂದಿರಿಗೆ ನೀವೇ ಬಂದು ಹಿಟ್ಟನ್ನು ತೆಗೆದುಕೊಂಡು ಹೋಗಿ ರೆಂದು ಹೇಳಿದೆನು.

ಲಿಂಗಮ್ಮ— ಅತ್ತಿಯವರೇ, ಹಾಗೆ ಹೇಳಲಿಲ್ಲ. ನಾವು ಮಾತನಾಡಿ ಸಿದರೂ ಕೂಡ ಮಾತನಾಡಲಿಲ್ಲ. ಯಾವನೋ ಒಬ್ಬ ಜಂಗಮನು ಬಂದಿದ್ದನು. ಅವನಿಗೆ ಧಾನ್ಯವನ್ನೆಲ್ಲ ಕೊಟ್ಟು ಬಿಟ್ಟಳು. ಬೇಕಾದರೆ ನೀವು ಬೀಸಲಿಕ್ಕೆ ಕೊಟ್ಟ ಧಾನ್ಯವು ಇರುವವೋ ಹೇಗೆ ವಿಚಾರ ಮಾಡಿರಿ.

( ನಂಬರ ೧೪ ) ಪದ ರಾಗ- ಕಮಾಚು ತಾಲ- ಏಕತಾಲ

ಪದ್ಮಮ್ಮ— ಎಲಿದವಸ ಮದಾಂಧೆ |
ಛೀ ಮದಾಂಧೇ | ಲೀಲೆಯ ತೊರಿದಿ ಜಂಗಮಗೆ ||
ಛಂದವೇನು ಮಂದಿರದೊಳಿಂಥ |
ಕುಂದವೇ ಛೀ ಮದಭರಿತೆ | ಛಲದೊಳ್ ಮದದಿಂದಾ ||
ಲೀಲೆಯ ತೋರಿದಿ ಜಂಗಮಗೆ ||೧||

ಎಲೇ, ನಿನಗೆ ಬೀಸಲಿಕ್ಕೆ ಕೊಟ್ಟ ಧಾನ್ಯವು ಎಲ್ಲಿರುವವು ? ಜಾಗ್ರತೆ ಯಾಗಿ ತೋರಿಸು !

ಮಲ್ಲಮ್ಮ— ಅತ್ತಿಯವರೇ, ನಿಮ್ಮ ಆಜ್ಞೆಯಂತೆ ನಾನು ಬೀಸುತ್ತ ಕುಳಿತಿದ್ದೆನು. ಒಬ್ಬ ಜಂಗಮ ಮೂರ್ತಿಯು ಬಂದು ಶಿವ ಶಿವಾ ಗುರುವಿನ ಧರ್ಮ ಕೋರಧಾನ್ಯದ ಭಿಕ್ಷಾ ! ಎಂದು ಕೇಳಲು ಸ್ವಲ್ಪ ಹಿಟ್ಟನ್ನೂ ಧಾನ್ಯವನ್ನೂ ನೀಡಿದೆನು. ಆನಂತರ ನೋಡುವಷ್ಟರಲ್ಲಿ

ಇಲ್ಲಿದ್ದ ಧಾನ್ಯವೂ ಹಿಟ್ಟೂ ಸಹ ಮಾಯವಾದವು. ಇದರ ಸ
ಚಾರವನ್ನು ಆ ಪರಮಾತ್ಮನೇ ಹೇಳಬೇಕಲ್ಲದೆ ನನಗೆ ಮಾತ್ರ ಸ
ವಿಲ್ಲ.

**ನಾಗಮ್ಮ—** ಅತ್ತಿಯವರೇ, ನೋಡಿದಿರಾ ಇವಳು ಮಹಾ ವೈ
ಇರುವಳು! ಇಂಥ ಸುದ್ದಿಗಳನ್ನು ಹೇಳಿದರೆ ಜನರು ಒ
ಇಲ್ಲ ಎಂಬುವ ಹವ್ಯಾಸವಿಲ್ಲದೆ ಮಾತನಾಡುವಳು.
ಕೈಯಿಂದ ಒಂದೂ ಕೆಲಸವಾಗುವದಿಲ್ಲ. ಹಗಲೆಲ್ಲ ಮುಂದ
ಮೇಲೆ ಕೈಯಾಡಿಸಿಕೊಂಡು ಸೂಳೆ ಬಸವಿಯರಂತೆ ಬೈತಲೆ ಪ
ತಿದ್ದಿಕೊಂಡು ಮಲ್ಲಯ್ಯಾ, ಮಲ್ಲಯ್ಯಾ! ಎಂದು ಯಾವ
ಒಬ್ಬ ಮಲ್ಲಯ್ಯನ ಧ್ಯಾನದಲ್ಲಿಯೇ ಮಗ್ನಳಾಗಿರುವಳು. ಇ
ಮಾಡುವ ಬಾಳ್ವೆಯು ಮಾತ್ರ ನಮಗೆ ಸರಿಗಾಣದು. ಇದರ
ನಿಮ್ಮ ಇಷ್ಟಬಂದಂತೆ ಮಾಡಬಹುದು!

**ಪದ್ಮಮ್ಮ—** ಸೊಸೆಯರೇ, ನೀವೀರ್ವರೂ ಹೇಳುವ ಮಾತೇ
ಇಂಥ ಆಚಾರಮಾಡುವದು ನಮ್ಮ ಕುಲಕ್ಕೆ ಒಳ್ಳೆತಲ್ಲ
ಸಲ್ಲದ ಶುಚಿ - ಸ್ನಾನಗಳು ನಮಗೆ ಏತಕ್ಕೆ ಬೇಕು? ಕಸದಲ್ಲಿ
ಕುಳಿತುಕೊಂಡು ಊಟಮಾಡುವದು ನಮ್ಮ ಪದ್ಧತಿಯು. ಮ
ಕೈ ತೊಳೆದರೇನು, ಅಥವಾ ತೊಳೆಯದಿದ್ದರೇನು ಕಂಬಳಿ ಕ
ಯಿಂದ ಕೈವರಿಸಿಕೊಂಡು ಅವಸರದಿಂದ ಹೊಲ - ಮನೆಗೆ ಹೋ
ವದೇ ಈ ನಮ್ಮ ರಡ್ಡಿಯ ಕುಲಕ್ಕೆ ಒಪ್ಪತಕ್ಕದ್ದಾಗಿದೆ.

**ಲಿಂಗಮ್ಮ—** ನೀವು ನಡೆದಂತೆಯೇ ನಾವೂ ಕೂಡಾ ನಡೆಯುತ್ತಿರು
ಇವಳು— ಈ ಮಲ್ಲಮ್ಮನು ಮಾತ್ರ ಇಲ್ಲದ - ಸಲ್ಲದ ಬಡಿವಾ
ಳನ್ನೇ ಮಾಡುತ್ತಿರುವಳು. ನಿಮ್ಮ ಮುಂದೆ ಹೆಚ್ಚು ಹೇಳಬಾ

**ಪದ್ಮಮ್ಮ—** ಸೊಸೆಯರೇ, ನಾವು ಮುಪ್ಪು ಆಗುವ ವರೆಗೂ
ಮಾಡಿದರೂ ಇಂಥ ಬಡಿವಾರವನ್ನೇ ಮಾಡಿದವರಲ್ಲ. ವರ್ಷ
ದುಸಾರಿ ಬರುವ ಉಗಾದಿ, ಪಂಚಮಿ, ಗೌರೀ ಹುಣ್ಣಿವೆ ಈ
ಗಳಲ್ಲಿ ಮಾತ್ರ ಮೈ ಕೈಯನ್ನು ಶುಚಿಮಾಡಿಕೊಳ್ಳುತ್ತಿದ್ದೆವು. ಬ

ಸೋಸುತ್ತ ದುಡದೂ ದುಡದೂ ಮನಿಯನ್ನು ಮುಂದಕ್ಕೆ ತಂದೆವು. ಈ ಹಾಳಾದ ರಂಡೆಯು ಬಂದು, ಮಡಿ - ಮಡಿಯೆಂದು ನಮ್ಮ ಮನೆತನದ ಬಾಳ್ವಿಗೆ ಇಷ್ಟು ತೊಂದರೆಯನ್ನು ಮಾಡಿದಳು.

ಮಲ್ಲಮ್ಮ— ಅತ್ತಿಯವರೇ, ನಾನಾದರೂ ಏನು ಅನ್ಯಾಯವಾದ ಕಾರ್ಯವನ್ನು ಮಾಡಿರುವೆನು? ಎಂಥಾ ನಿಮ್ಮ ಪವಿತ್ರವಾದ ವಿಚಾರ ವಿದು? ಪ್ರತಿದಿವಸ ಸ್ನಾನವನ್ನು ಮಾಡುವದು, ಲಿಂಗ ಪೂಜೆಯನ್ನು ಮಾಡುವದು, ಅನ್ಯಾಯವಾದ ಕಾರ್ಯವೆಂದು ಭಾವಿಸಿರುವಿರೋ? ರಡ್ಡಿಕುಲದವರು ಸ್ನಾನ ಪೂಜಾದಿಗಳನ್ನು ಮಾಡಬಾರದೆಂದು ಯಾವ ಧರ್ಮಶಾಸ್ತ್ರದಲ್ಲಿ ಹೇಳಿದೆ? ರಡ್ಡಿಯ ಕುಲದವರಾದರೇನು, ಮತ್ತಾವ ಕುಲದವರಾದರೇನು ಪತಿವ್ರತೆಯರಾದಮೇಲೆ ಸತಿಯರು ಪತಿಯರನ್ನು ಪೂಜಿಸುವಂತೆ ಲಿಂಗವಂತರಾದಮೇಲೆ ಲಿಂಗವನ್ನು ಪೂಜಿಸುವದೇ ಅವರ ಧರ್ಮವು. ಇಲ್ಲವಾದರೆ ಲಿಂಗವನ್ನು ಧರಿಸಿಕೊಂಡು ಪ್ರಯೋಜನವೇನು? ಲಿಂಗ ಪೂಜೆಗಿಂತಲೂ ಅಧಿಕವಾದ ಜಪವಿಲ್ಲ. ಲಿಂಗ ಪೂಜೆಗಿಂತಲೂ ಅಧಿಕವಾದ ವ್ರತವಿಲ್ಲ! ಲಿಂಗ ಪೂಜೆಯು ಸಕಲ ಸುಖಗಳಿಗೆ ಸಾಧನವಾಗಿರುವದು. ಆದುದರಿಂದಲೇ ಸಕಲ ಸುರಾಸುರರು ಲಿಂಗವನ್ನು ಪೂಜಿಸಿ ಕೃತಾರ್ಥರಾದರು. ಅವರಲ್ಲಿ ವಿಷ್ಣುವು ಇಂದ್ರನೀಲಮಯವಾದ ಲಿಂಗವನ್ನು ಪೂಜಿಸಿ ವಿಷ್ಣುತ್ವವನ್ನು ಹೊಂದಿದನು. ಬ್ರಹ್ಮನು ಶಿಲಾಮಯವಾದ ಲಿಂಗವನ್ನು ಪೂಜಿಸಿ ಬ್ರಹ್ಮಪದವಿಯನ್ನು ಸಂಪಾದಿಸಿದನು. ಇಂದ್ರನು ರತ್ನಮಯವಾದ ಲಿಂಗವನ್ನು ಪೂಜಿಸಿ ಇಂದ್ರಪದವಿಯನ್ನು ಗಳಿಸಿದನು. ಹೀಗೆ ಲಿಂಗಪೂಜೆಯ ಮಹಿಮೆಯು ಸಕಲ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಎಂದು ಜ್ಞಾನಿಗಳು ಹೇಳುತ್ತಾರೆ. ಅತ್ತಿಯವರೇ, ನಾನು ಮಾಡುವ ಇಂಥಾ ಲಿಂಗಪೂಜಾದಿ ನಿತ್ಯಕರ್ಮಗಳಿಂದ ಗೃಹ ಕರ್ಮಗಳಿಗೆ ಏನು ತೊಂದರೆಯು ಸಂಭವಿಸಿರುವದು? ಸುಮ್ಮನೇ ಏತಕ್ಕೆ ದಂಡಿಸುವಿರಿ?

ಪದ್ಮಮ್ಮ— ಎಲೇ ಜಗಳಗಂಟಿ! ನೀನು ನನಗೆ ಉಪದೇಶವನ್ನು ಮಾಡುವಿಯಾ? ನಿನ್ನ ಉಪದೇಶವೆಲ್ಲವನ್ನು ನಾನು ಚನ್ನಾಗಿ ಬಲ್ಲೆನು.

ಸುಮ್ಮನೆ ನನ್ನನ್ನು ಸಿಟ್ಟಿಗೆಬ್ಬಿಸಬೇಡ, ಅಡಿಗೆ ಮಾಡುವ ಕೆಲಸಕ್ಕೆ ಹಚ್ಚಿದರೆ ಗಡಿಗೆಗಳನ್ನೆಲ್ಲಾ ಒಡೆದಿಟ್ಟೆ, ಬೀಸುವ ಕೆಲಸದಲ್ಲಿ ನೋಡಿದರೆ ಹೀಗೆ ಮಾಡಿಟ್ಟೆ! ಹೀಗಿದ್ದು ನಾನು ಹಾಗೆ ಮಾಡಿಲ್ಲಾ; ಹೀಗೆ ಮಾಡಿಲ್ಲಾ, ಅಂತ ಬೊಗಳುವಿಯಾ? ನೀನು ಮಾತ್ರ ಈ ಮನೆಯಲ್ಲಿದ್ದರೆ ಆ ನನ್ನ ಮಕ್ಕಳ ಬಾಳ್ವೆಯು ಎಂದಿಗೂ ನೆಟ್ಟಗಾಗಲಾರದು. ಕಾರಣ ನೀನು ಗೋವುಗಳನ್ನು ಕಾಯಲಿಕ್ಕೆ ಅಡವಿಗೆ ಹೋಗು.

**ಮಲ್ಲಮ್ಮ—** ಅತ್ತಿಯವರೇ, ನೀವು ನನಗೆ ಮಹದುಪಕಾರವನ್ನು ಮಾಡಿದಿರಿ. ಏಕಂದರೆ ಗೋಸೇವೆಯನ್ನು ಮಾಡುವದಕ್ಕಾಗಿ ನನ್ನನ್ನು ನೇಮಿಸಿದ್ದರಿಂದ ನೀನೇ ನನ್ನ ಹಡೆದ ತಾಯಿಯು! ಇಂಥ ನಿನ್ನ ಅಜ್ಞೆಯನ್ನು ಶಿವಾಜ್ಞೆಗಿಂತಲೂ ಅಧಿಕವಾಗಿ ಕಾಪಾಡುತ್ತೇನೆ!

**ಪದ್ಮಮ್ಮ—** ತಂಗೀ ನಾಗಮ್ಮಾ, ಇವಳು ಉಟ್ಟಿರುವ ಹೊಸಬಟ್ಟೆಯನ್ನು ಬಿಡಿಸಿ, ಅಲ್ಲಿ ಒಂದು ಮೂರುಮೊಳದ ಹರಕು ಸೀರೆಯು ಇರುವದು ಅದನ್ನು ತಂದು ಕೊಡು ಹೋಗು.

**ನಾಗಮ್ಮ—** ಮಲ್ಲವ್ವಾ, ಅತ್ತಿಯವರು ಹೇಳಿದ ಮಾತನ್ನು ಕೇಳಿದಿಯಾ! ಇಲ್ಲಿ ಬಾ, ಆ ಸೀರೆಯನ್ನು ಬಿಟ್ಟುಕೊಡು, ಇನ್ನೊಂದು ಹಳೆ ಸೀರೆಯನ್ನು ಕೊಡುವೆನು.

**ಮಲ್ಲಮ್ಮ—** ಅಕ್ಕಾ, ಪ್ರಥಮದಲ್ಲಿ ಹೊಸದಾಗಿದ್ದ ಪದಾರ್ಥವು ಬರಬರುತ್ತ ಹಳೇದಾಗಲಿಕ್ಕೇ ಬೇಕು! ಈ ಅನಿತ್ಯವಾದ ಪದಾರ್ಥಕ್ಕೆ ಆಶೆ ಪಟ್ಟರೆ ಪ್ರಯೋಜನವೇನು? ತಾಯಿ ಗರ್ಭದಿಂದ ಹೊಸ ಚರ್ಮವನ್ನು ಸುತ್ತಿಕೊಂಡು ಬಂದ ಈ ದೇಹವೇ ಮುಪ್ಪಾಗಿ ಹೋಗುವದು. ಅತ್ತೆಯವರಾದರೂ, ಗೋಸೇವೆಯನ್ನು ಮಾಡಿ ಕೃತಾರ್ಥಳಾಗೆಂದು ನನಗೆ ಮಹದಾಶೀರ್ವಾದವನ್ನು ಮಾಡಿರುವರು. ನಡಿ ಈ ವಸ್ತ್ರವನ್ನು ತೆಗೆದು ಕೊಂಡು ಹಳೇ ವಸ್ತ್ರವನ್ನು ಕೊಡು.

( ನಂಬರ ೧೫ ) ಪದ ರಾಗ – ಬಿಹಾಗ ತಾಲ – ತ್ರಿತಾ

ಬಿಡಿಸಿ ವಸ್ತ್ರವನು | ಜನ್ಮಕಿದೂ | ಬಹು ವ್ಯರ್ಥವೇ |

ಸುಖವೇಕೆ | ಮಹಾಸಂಪದವೂ | ಬೇಡ ಯೆನಗಿದೂ ||
ಹಳಿಯದಾದವೇಲಿದನ್ನು | ಯಾರು ನೋಡ್ವರವ್ವಾ ||೧||
( ಹೋಗುವಳು )

ಪದ್ಮವ್ಮ— ಲಿಂಗವ್ಮಾ, ನಾನು ಹೀಗೆ ಮಾಡಿದ್ದು ಒಳ್ಳೇದಾಯಿತು ನೋಡು. ಇಂಥ ಬಡಿವಾರ ಹೆಂಗಸರು ನಮ್ಮಂಥ ಬಾಳ್ವೆಸ್ಥರ ಮನಿಯಲ್ಲಿರಬಾರದು. ಆದ್ದರಿಂದ ಇವಳು ಅಡವಿಗೆ ಹೋಗಿ ದನಗಳನ್ನೇ ಕಾಯಲಿ !

ಲಿಂಗವ್ಮ— ಇವಳು ಮಾಡುವ ವೈಯ್ಯಾರವನ್ನು ನೋಡಿ ನೋಡಿ ನಮಗೆ ಬಹಳ ಬೇಸರಿಕೆಯಾಗಿತ್ತು. ನೀವು ಅವಳಿಗೆ ತಕ್ಕೆ ಕೆಲಸವನ್ನು ನೇಮಿಸಿದಿರಿ.

( ನಂಸರ ೧೬ ) ಪದ ರಾಗ – ಗರುಡಧ್ವನಿ ತಾಲ – ತ್ರಿತಾಲ

ಪದ್ಮವ್ಮ—ಬಡಿವಾರವ | ಮಾಡುತ ಕಾಲವನಾ |
ಕಳಿವಳಾ ಮಾನಿನೀ || ಅಡವಿಗೀಗಾ |
ಈಡು ಮಾಡಿದೆ | ಕಡುಮೂರ್ಖಳ ನಡತಿಯು |
ಸರಿಯಲ್ಲವು ||೧||

ನಾಗವ್ಮ— ಲಿಂಗವ್ಮಾ, ಇವಳಿಗೆ ಈ ದಿನದ ಆಹಾರಕ್ಕೇನಾದರೂ ಕೊಡು.

ಲಿಂಗವ್ಮ— ಏನಿರುವದು. ತಂಗಳ ಅಂಬಲಿ ಮಾತ್ರ ಸ್ವಲ್ಪ ಇರುವದು.

ಪದ್ಮವ್ಮ— ಅದನ್ನೇ ಸ್ವಲ್ಪ ಕೊಟ್ಟು ಕಳುಹಿಸು.

ಲಿಂಗವ್ಮ— ಆಗಲಿ. ( ಒಳಗೆ ಹೋಗಿ ಅಂಬಲಿಯನ್ನು ತಂದು ) ಮಲ್ಲವ್ವಾ. ಈ ಅಂಬಲಿಯನ್ನು ತೆಗೆದುಕೋ.

ಮಲ್ಲವ್ಮ— ಅಕ್ಕಾ, ಇದನ್ನು ಹೇಗೆ ತೆಗೆದುಕೊಳ್ಳಲಿ. ಒಂದು ಪಾತ್ರೆಯನ್ನಾದರೂ ಕೊಡಿರಿ.

ಪದ್ಮಮ್ಮ— ಕೇವಲ ವ್ಯಭಿಚಾರಿಯಂತೆ ವರ್ತಿಸುವ ನಿನಗೇ ಪಾತ್ರೆಯು. ನಾಗಮ್ಮಾ ಅವಳು ಒಡೆದಿಟ್ಟಿರುವ ಆ ಗಡಿಗೆಯ ಕೊಡು. ಅದರಲ್ಲೇ ಹಾಕಿಕೊಂಡು ಹೋಗಲಿ.

ನಾಗಮ್ಮ— ಇಗೋ ತೆಗೆದುಕೋ. ಇದರಲ್ಲಿ ಹಾಕಿಕೊಂಡು ಹೋ

ಮಲ್ಲಮ್ಮ— ಪತಿವ್ರತೆಯಾದ ಪಾಂಚಾಲಿಗೆ ಸೂರ್ಯ ನಾರಾಯ ಯಾವ ಪಾತ್ರೆಯನ್ನು ದಯಪಾಲಿಸಿದ್ದನೋ ಅಂಥ ಅಕ್ಷ ಪಾತ್ರೆಯೇ ಇದು.

ಲಿಂಗಮ್ಮ— ಇದನ್ನು ತೆಗೆದುಕೊಂಡು ಭಿಕ್ಷಾ ! ಭಿಕ್ಷಾ ! ಎ ಹೋಗು. ನಿನ್ನ ಆಟವು ಎಲ್ಲರಿಗೂ ತಿಳಿದದ್ದೇ ಇರುವದು.

ಮಲ್ಲಮ್ಮ— ಅಕ್ಕಾ, ಭಿಕ್ಷೆಯನ್ನು ಬೇಡುವದು ಕನಿಷ್ಟ ತಿಳಿದಿರುವಿಯಾ ? ಜಗದೀಶ್ವರನಾದ ಆ ಶಂಕರನೂ ಕೂಡಾ ಕಪಾಲವನ್ನು ಹಿಡಿದು ಕೊಂಡು ಭಿಕ್ಷಾಟನ ಮಾಡುವದಿಲ್ಲವೇ

ಪದ್ಮಮ್ಮ— ತಂಗೀ ನಾಗಮ್ಮ - ಲಿಂಗಮ್ಮ ಇವಳನ್ನು ಇನ್ನು ಮನೆಯಿಂದ ಹೊರಗೆ ತಳ್ಳಿರಿ.

ನಾಗಮ್ಮ— ಎಲೇ, ಇನ್ನು ತಲೆಯಲ್ಲಾ ಹರಟಬೇಡ! ಅತ್ತೆಯ ಹೇಳಿದಂತೆ ನಮ್ಮ ಮನೆಯನ್ನು ಬಿಟ್ಟು ನಿನ್ನ ಕಾರ್ಯಕ್ಕೆ ಹೋ

( ನಂಬರ ೧೭ ) ಪದ ರಾಗ – ಫಿಲ್ ಗಜಲ್ ಮಿಶ್ರ ತಾಲ -

ಮಲ್ಲಮ್ಮ- ಪೋಗ್ವೆ ಜನನಿ ಜನಕರೆ ನಮಿಸುವೆ ನಾ |
ಎನ್ನಿಂದಲಿ ಅತ್ತಿಮಾವರ | ಘನಮಾನ ಪೋಯಿತೀ |
ಧನ್ಯಾ ಧನ್ಯರು ನೀವಿರಲು ಗೃಹದಿ || ೧ ||

ಅಕ್ಕಾ, ನಿಮ್ಮಿಂದಲಾದರೂ ಈ ಮನೆಯು ಶುಭವಾಗಿರಲಿ. ರುವ ಈ ಸೀರೆಯನ್ನು ಮಡಿ ಮಾಡಿಕೊಳ್ಳಬೇಕಾದರೆ ಇನ್ನೊ ಸೀರೆ ಬೇಕಾಗುವದು. ಅದನ್ನಾದರೂ ಕೊಟ್ಟು ನಿಮ್ಮ ಕೀರ್ತಿಯನ್ನು ತೆಗೆದುಕೊಳ್ಳಬೇಕೆಂದು ಬೇಡಿಕೊಳ್ಳುವೆನು.

ನಾಗಮ್ಮ— ಒಂದು ಕೊಡುವದಕ್ಕೆ ಅತ್ತಿಯವರ ಅಜ್ಞೆಯಾಗಿ

ಇನ್ನೊಂದು ಕೊಡಲು ನಮಗೆ ಸಾಧ್ಯವಿಲ್ಲ, ಸುಮ್ಮನೆ ಹೊರಟು ಹೋಗು.

( ಹುಚ್ಚ ಭರಮರಡ್ಡಿಯ ಪ್ರವೇಶ )

( ನಂಬರ ೧೪ ) ಪದ

ಇರುವರವ್ವಾ ತಾಯಿ ತಂದೆಗಳೂ | ಶಿವಲೋಕದೊಳು |
ಮಹಾದೇವ ನಮ್ಮಪ್ಪನೂ | ಪಾರ್ವತಿ ನಮ್ಮವ್ವನು |
ಕೇಳ್ರಿ ಕೇಳ್ರಿ ‖ ೧ ‖

ಆಡಲೇ, ಗಾಳೀಪಟಾ ಆಡಲೇ, ರೊಟ್ಟಿ ಕೊಡತೇನಿ ಆಡಲೇ.

ಪದ್ಮವ್ವ— ಅಯ್ಯೋ ಇಂಥ ಹುಚ್ಚನಯೋಡಿಗೆ ಇವಳು ಬಾಳ್ವೆಮಾಡುವದುಂಟೇ ?

ಭರಮರಡ್ಡಿ — ಅವ್ವಾ, ಅವ್ವಾ ಗಾಳೀಪಟಾ ಆಡಿಸ್ತೆ. ಪಟಾ ಹಾರಿ ಹಾರಿದಾಂಗೆ ಅದರ್ಹಿಂದೆ ನಾನೂ ಹಾರಿ ಹಾರಿ ಬಂದೆ, ಹೊಟ್ಟೆ ಹಸ್ತೈತಿ ತಿನ್ನಾಕೆ ಒಂದು ಚೂರು ರೊಟ್ಟಿ ಕೊಡವ್ವಾ.

ಪದ್ಮವ್ವ— ಎಲೋ ಹುಚ್ಚ ಭರಮಾ, ಹುಚ್ಚಾ !

ಭರಮರಡ್ಡಿ— ಅವ್ವಾ ನಾನು ಹುಚ್ಚನೇ ?

ಪದ್ಮವ್ವ-- ನೀನು ಹುಚ್ಚನೂ ಅಲ್ಲಾ. ಜಾಣನೂ ಅಲ್ಲಾ. ಅರ ಹುಚ್ಚನಾಗಿ ಹುಟ್ಟಿದೆಪ್ಪಾ.

ಭರಮರಡ್ಡಿ— ಇಂಥ ಅರಹುಚ್ಚನನ್ನು ಯಾಕೆ ಹಡದಿ? ಅಪ್ಪ ಹೇಳಿದ್ನೆ ? ನಾನು ಹೇಳಿದ್ನೆ ? ನೆರೆಹೊರೇರು ಏನಾದರೂ ಹೇಳಿದ್ರೆ ? ಸರ್ಕಾರದಿಂದ ಚೀಟಿ ಏನಾರೆ ಬಂದಿತ್ತೆ? ನೀನು ಮಾಡಿರೋದು ನೋಡಿದ್ರೆ ನನಗೆ ಬಹಾಳ ಚಿಟ್ಟ ಬರ್ತೈತಿ ನೋಡವ್ವಾ. ಅಲ್ಲಿ ಬೇವಿನ ಮರದಾಗೆ ಗೊಂಬಿ ಆಡ್ತಾವೆ ನಾನು ಹೋಗ್ತೀನಿ. ತಿನ್ನಾಕೆ ಏನಾರೆ ಕೊಡು.

ಪದ್ಮವ್ವ— ಎಲೋ, ಹುಚ್ಚ ಭರಮಾ ನಾನು ಯಾರು ಎಂತು ಎಂಬುವದನ್ನು ನಿನ್ನ ಮನಸ್ಸಿನಮೇಲೆ ತಂದು ನೋಡು. ಹೆಂಡತೀಮುಂದೆ

ಹೀಗೆ ಹುಚ್ಚು ಹುಚ್ಚಾಟ ಮಾಡಿದರೆ ಕೇವಲ ಹಾಶ್ಯಾಸ್ಪ
ವೇನೋ !

ಭರಮರಡ್ಡಿ-- ಹಾ ನಾನು ಯಾರು? ಮನಶ್ಯಾ. ನಮ್ಮಪ್ಪನ ಹೊ
ಹುಟ್ಟಿದ ಸಣ್ಣಮೀಸಿ ಸರದಾರ. ಈಕೆ ನನ್ನ ಹಣ್ತೆವ್ವಾ.
ಹೌದು ನನ್ನ ಹಣ್ತೆವ್ವಾ !

ಮಲ್ಲಮ್ಮ— ಹೌದು ಹೌದು ನಾನೇ ನಿಮ್ಮ ಅರ್ಧಾಂಗಿನಿಯು.
ನಿಮ್ಮ ಪಾದಕ್ಕೆ ವಂದಿಸುವೆನು.

ಭರಮರಡ್ಡಿ— ನೀನು ಅರ್ಧಾಂಗಿ, ನಾನು ಪೂರಾ ಅಂಗಿ.
ಹಣ್ತೆವ್ವಾ ನಾನೂ ನಿನ್ನ ಕಾಲಿಗೆ ಬೀಳ್ತೇನಿ !

ಮಲ್ಲಮ್ಮ— ಶಿವ ಶಿವಾ ! ಈ ನುಡಿಗಳನ್ನು ಈ ಕರ್ಣಗಳಿಂದ
ಕೇಳಲಿ ? ಹೇಯವಾದ ಸಂಸಾರದಲ್ಲಿ ಮನಸ್ಸನ್ನು ತೆಗೆದು
ಪೂಜಾ ವ್ರತದಿಂದ ಮೋಕ್ಷವನ್ನು ಪಡೆಯಬೇಕೆಂದರೆ ಈ
ಗಳಿಂದ ಅದಕ್ಕೂ ಕೂಡಾ ಅವಕಾಶವಿಲ್ಲದಂತಾಯಿತು.
ತಂದೆ-ತಾಯಿಗಳು ದ್ರವ್ಯದ ಆಶೆಗಾಗಿ ಯಾವದೊಂದು
ಮಾಡದೆ ಈ ಹುಚ್ಚರಿಗೆ ನನ್ನನ್ನು ಮದುವೆ ಮಾಡಿದರು.
ರಾದರೂ ಪತಿಯರನ್ನು ಸಾಕ್ಷಾತ್ ದೇವರೆಂದು ಭಾವಿಸ
ಸತಿಯರ ಧರ್ಮವು. ಪತಿಗಳಿಂದಲೇ ಸತಿಯರಿಗೆ ಸದ್ಗ
ಅಂಥ ಪತಿಯರನ್ನು ಧಿಕ್ಕರಿಸುವ ಸತಿಯರಿಗೆ ರೌರವ ನರಕವ
ಡಿತವಾಗಿ ತಪ್ಪದು ! ಆದ್ದರಿಂದ ಇವರೇ ನನಗೆ ದೇವರು.
ವಂತಾ ! ಮಲ್ಲಿಕಾರ್ಜುನಾ ! ನಿನ್ನ ಲೀಲೆಯು ಅಗಾಧವ
ಹುಚ್ಚನಾಗಿರುವ ನನ್ನ ಪತಿಯನ್ನು ಜ್ಞಾನವಂತನನ್ನಾಗಿ
ನನಗೆ ಮೋಕ್ಷಮಾರ್ಗವನ್ನು ತೋರಿಸೆಂದು ಜಾಗ್ರತ್ಸ್ವಪ್ನ-ಸು
ಗಳಲ್ಲಿಯೂ ನಿನ್ನನ್ನು ಧ್ಯಾನಿಸುತ್ತಿರುವೆನು.

ಭರಮರಡ್ಡಿ— ಹಣ್ತೆವ್ವ, ನಾನೂ ನಿನ್ನ ಕಾಲಿಗಿ ಬೀಳ್ತೇನಿ.

ಪದ್ಮಮ್ಮ— ಎಲೊ ಹುಚ್ಚು ಖೋಡಿ, ಹೆಂಡತಿಗೆ ನಮಸ್ಕಾರ
ಬಾರದು. ನೀನು ತಿನ್ನುವದಕ್ಕೆ ರೊಟ್ಟೀ ಕೇಳುವಿ, ಈ ನಿ

ಡತಿಯು ಒಂದು ಚೂರು ಸಹ ಉಳಿಯದಂತೆ ಯಾವನೋ ಒಬ್ಬ ಪುಂಡ ಜಂಗಮನಿಗೆ ಕೊಟ್ಟಿರುವಳು. ನಾನೇನು ಮಾಡಲಿ? ನಿನಗೆ ಎಲ್ಲಿಂದ ಕೊಡಲಿ?

ಭರಮರಡ್ಡಿ— ಬಹಾದ್ದೂರ ಭರಮರಡ್ಡಿಗೆ ರೊಟ್ಟಿ ಇಲ್ಲದಂಗೆ ಆ ಜಂಗಮ ತಗೊಂಡೋಗ್ಯಾನೆ? ಹಂಗಾರೆ ನಾನು ಹೋಗಿ ಆ ಅಯ್ಯಪ್ಪನ ಹೊಟ್ಟಿ ಬಗೆದು, ರೊಟ್ಟೀ ಚೂರು ತೊಗೊಂಡು ಬರ್‍ತೀನಿ ನೋಡು!

ಪದ್ಮಮ್ಮ— ಎಲೋ ಹುಚ್ಚಾ, ಇವಳನ್ನೇ ಮನೆಬಿಟ್ಟು ಹೊರಗೆ ಹಾಕಿದರೆ ರೊಟ್ಟೀ ಚೂರು ಇದ್ದೇ ಇರುವವು. ಆದ್ದರಿಂದ ಇವಳನ್ನು ದನ ಕಾಯುವದಕ್ಕಾಗಿ ಅಡವಿಗೆ ಕಳುಹಿಸಿ ಬಿಡುವೆನು. ನೀನು ಸುಮ್ಮನಿರು.

ಭರಮರಡ್ಡಿ— ಹಣ್ತೆವ್ವನ್ನ ಅಡವಿಗೆ ಕಳಸ್ತೀಯಾ?

ಪದ್ಮಮ್ಮ— ಹೂ! ನೀನು ಸುಮ್ಮನಿರು.

ಭರಮರಡ್ಡಿ— ಹಂಗಾರೆ ನಾನೂ ಹೋಗ್ತೀನಿ.

ಪದ್ಮಮ್ಮ— ನೀನು ಹೋಗಬೇಡ. ಅವಳೊಬ್ಬಳೇ ಹೋಗಲಿ.

ಮಲ್ಲಮ್ಮ— ಅತ್ತಿಯವರೇ, ನಿರಪರಾಧಿನಿಯಾದ ನನ್ನ ಮೇಲೆ ಅಪರಾಧವನ್ನು ಹೊರಿಸುವಿರಲ್ಲಾ. ನನ್ನಂಥ ಹೆಣ್ಣುಮಕ್ಕಳನ್ನು ನೀವು ಹಡದೇ ಇಲ್ಲವೇ?

ಪದ್ಮಮ್ಮ— ಗಂಡನ ಮುಂದೆ ಎಂಥಾ ಸತ್ಯವತಿಯಂತೆ ಮಾತನಾಡುವಿ. ತಾಯಿ-ಮಕ್ಕಳಲ್ಲಿ ಬೇಸರ ಹುಟ್ಟಿಸುವಂಥ ಈ ಮುರುಕು ಮಾತುಗಳನ್ನು ಎಲ್ಲಿ ಕಲಿತಿರುವಿ? ನಾವು ಪೂರ್ವದ ಜನರು. ಈ ಕಾಲದ ನಿಮ್ಮಂಥ ಬಡಿವಾರದ ಹೆಂಗಸರಲ್ಲ. ನಾನು ಸುಳ್ಳು ಹೇಳಿದರೆ ಈ ನಾಗಮ್ಮ ಲಿಂಗಮ್ಮ ಹೇಳಲಿ.

ನಾಗಮ್ಮ— ನಿಜ. ಮೈದುನರೇ ಅತ್ತಿಯವರು ಹೇಳುವ ಮಾತೇ ನಿಜ. ಅಡಿಗೆ ಮಾಡುವದಕ್ಕೆ ಹೋಗಿ ಗಡಿಗೆಗಳನ್ನೆಲ್ಲ ಒಡೆದು ನಿಂತಳು.

ಬೀಸುವದಕ್ಕೆ ಹಚ್ಚಿದರೆ ಜೋಗಿ- ಜಂಗಮರನ್ನು ಕರೆದು ಧಾನ್ಯವ ನ್ನೆಲ್ಲ ಕೊಟ್ಟು ಕುಂತಳು. ನಾವು ನಿಮ್ಮ ಮುಂದೆ ಹೇಳಬಾರದು. ನಿಮ್ಮ ಇಷ್ಟ ಬಂದಹಾಗೆ ಮಾಡಬಹುದು.

ಭರಮರಡ್ಡಿ— ಹಣ್ತೆವ್ವ! ಹುಚ್ಚ್ಯಾ ಅಂತ ಹೀಗೆ ಮಾಡ್ತಿಯಾ? ಹೋಗು. ನಮ್ಮ ಮನಿ ಬಿಟ್ಟು ಹೋಗು. ಇಲ್ಲ ಅಂದ್ರೆ ಈ ಗಾಣ ಪಟದ ಬಾಲಕ್ಕೆ ಕಟ್ಟಿ ಬಿಡ್ತೀನಿ ನೋಡು!

ಮಲ್ಲಮ್ಮ— ಪ್ರಾಣಕಾಂತನೇ, ಪತಿಗೆ ಹೊರತಾದ ಸ್ತ್ರೀಯಳು ಕ್ಷಣ ಮಾತ್ರವಾದರೂ ಈ ಭೂಮಿಯಮೇಲೆ ಜೀವಿಸಿರಬಾರದು! ನಿನ್ನ ಧ್ಯಾನವೇ ನನಗೆ ಶಿವಪಂಚಾಕ್ಷರೀಮಂತ್ರ ಜಪವೆಂತಲೂ ನಿನ್ನ ಸಮೀ ಪವಾಸವೇ ನನಗೆ ಕೈಲಾಸವೆಂತಲೂ ತಿಳಿದಿರುವೆನು. ನಿಜವಾಗಿಯೂ ನಾನು ಯಾವ ಅಪರಾಧವನ್ನೂ ಮಾಡಿದವಳಲ್ಲ.

ಪದ್ಮಮ್ಮ— ಅಹಹ! ಗಂಡನ ಮನಸ್ಸನ್ನು ಸೆಳೆಯುವ ಗಂಡು ದೇವಿ ಎಂದರೆ ಇವಳೇ! ಎಲೇ ಅಪರಾಧವನ್ನು ಮಾಡಿದವಳಲ್ಲವೆಂದು ಹೇಳುವಿಯಲ್ಲ; ನೀನು ನನ್ನ ಆಜ್ಞೆಯನ್ನು ಉಲ್ಲಂಘಿಸಿಲ್ಲವೇ?

ಮಲ್ಲಮ್ಮ— ಇಲ್ಲ! ಅತ್ತಿಯವರೇ ಸತ್ಯವಾಗಿಯೂ ಉಲ್ಲಂಘಿಸಿಲ್ಲ!

ಪದ್ಮಮ್ಮ— ಹಾಗಾದರೆ ಆ ತಿರುಕನಿಗೆ ಅನ್ನವನ್ನು ಏಕೆ ಕೊಟ್ಟೆ?

ಮಲ್ಲಮ್ಮ— ಯಾಚಕರಿಗೆ ಅನ್ನವನ್ನು ಕೊಟ್ಟರೆ ಆಜ್ಞೆಯನ್ನು ಮೀರಿ ದಂತಾಯಿತೇ?

ಪದ್ಮಮ್ಮ— ಬೀಸಿದ ಹಿಟ್ಟನ್ನು ಜಂಗಮನಿಗೆ ಕೊಟ್ಟದ್ದು ಸುಳ್ಳೋ ನಿಜವೋ?

ಮಲ್ಲಮ್ಮ— ಆ ಜಂಗಮನು ಈ ಊರಲ್ಲಿ ಒಂದು ತುತ್ತು ಅನ್ನ ಸಿಗ ಲಿಲ್ಲ ತಾಯಿ ತುತ್ತು ರೊಟ್ಟಿಯನ್ನು ಕೊಡು ಎಂದು ಕೇಳಿದ್ದಕ್ಕಾಗಿ ಸ್ವಲ್ಪ ಹಿಟ್ಟನ್ನು ಕೊಟ್ಟದ್ದು ನಿಜ.

ಪದ್ಮಮ್ಮ— ಭರಮರಡ್ಡೀ, ನಿನ್ನ ಹೆಂಡತಿಯ ಅವತಾರವನ್ನು ನೋಡಿ ದೆಯಾ! ಕೇಳಿ ಕೇಳಿ ಸುಮ್ಮನೆ ನಿಂತಿರುವೆಯಾ? ನೀನು ಇಂಥ ಕೈಲಾಗದವನಾದ್ದರಿಂದಲೇ ಇವಳು ಇಷ್ಟು ಮಿತಿಮೀರಿರುವಳು

ನನ್ನ ಮಕ್ಕಳಲ್ಲಿ ನಿನ್ನದೇ ಒಂದು ಹೊಸ ಅವತಾರ. ಇಂಥ ನಾಚಿಕೆ ಇಲ್ಲದ ಸಂಸಾರವನ್ನು ಮಾಡುವದಕ್ಕಿಂತಲೂ ಸಾಯುವದೇ ಲೇಸು!

**ಭರಮುರಡ್ಡಿ**— ಹೊ! ಹೊ! ಹೊ! ಅವ್ವ ನನ್ನ ಸಾಯಿ ಅಂತಾ ಅಂತಾ ಹೇಳ್ತಾಳೆ. ನಾನು ಸಾಯೋದುಲ್ಲಾ ಹೋಗು. ಏ ಹಣ್ತೆವ್ವ ಇಗೋ ನಿನ್ನ ಒಂದೇ ಏಟಗೆ ಸಾಯಗೊನ್ನಿ ಬಿಡ್ತೇನಿ.

( ಹೇಮುರಡ್ಡಿ ಪ್ರವೇಶ )

**ಹೇಮುರಡ್ಡಿ**— ಮಗು ಭರಮುರಡ್ಡಿ, ಏನಿದು ನಿನ್ನ ಅವಿಚಾರವು! ಪರಮಶೀಲಳಾದ ನಿನ್ನ ಸತಿಯಳಲ್ಲಿ ಇಷ್ಟು ಆಗ್ರಹವೇಕೆ?

**ಪದ್ಮಮ್ಮ**— ಇಗೋ ಈ ವಿಷಯದಲ್ಲಿ ನೀನು ಮಾತ್ರ ಬರಬೇಡ. ನೀನು ಮಾಡಿಟ್ಟ ಕೇಡನ್ನು ನಾವೆಲ್ಲರೂ ಅನುಭವಿಸಬೇಕಾಗಿರುವದು. ಇವಳನ್ನು ಈ ನನ್ನ ಮಗನಿಗೆ ಲಗ್ನಮಾಡಬೇಡವೆಂದು ಹೇಳಿದರೆ, ಕೇಳದೆ ತಂದು ಮನೆಗೆ ಮಾರಿಯನ್ನು ಮಾಡಿ ಕುಳ್ಳಿರಿಸಿದಿ. ಇದು ಸಾಲದೆ ಇವಳನ್ನೇ ಪರಮಶೀಲಳೆಂದು ಮಗನ ಮುಂದೆ ಹೇಳಲಿಕ್ಕೆ ಬಂದಿರುವೆಯಾ? ಮುದುಡಾ!

( ನಂಬರ ೧೯ ) ಪದ ರಾಗ–ತಿಲಕಕಾಮೋದ ತಾಲ–ದಾದರಾ

**ಹೇಮುರಡ್ಡಿ**- ದುರುಳ ನಾರೀ | ಮನೆಗೆ ಮಾರಿ |
ಸರಿಯೋ ನಿಷ್ಕರುಣಕಾರೀ ||
ಪರರ ಪುತ್ರಿಯರಿಗೆ| ವಿರಸಾವಾ ತೋರುವರೀ |
ಸರಿಯಹುದೇ ಮಂಗಲಾಂಗೀ ||೧||

ಬೇಡವೆಂದರೆ ತಂದೆವೆಂಬ ಹಟಕ್ಕಾಗಿ ಹೀಗೆ ಮಾಡುವೆಯಾ? ಎಲೇ ಪಾತಕರಂಡೇ, ನಿನ್ನ ದೇಹವೆಲ್ಲಾ ಮುಪ್ಪಾದರೂ ಮನಸ್ಸಿನ ಕಾಠಿಣ್ಯವು ಮಾತ್ರ ಮುಪ್ಪಾಗಲಿಲ್ಲ. ಶಿವ ಶಿವಾ! ಈ ಸಿಪ್ಪಾಪುರದ ಜನರೆಲ್ಲರೂ ಈ ಮಲ್ಲಮ್ಮನು ಬಹಳ ಗುಣವತಿಯೆಂದು ಕೊಂಡಾಡುತ್ತಿರುವರು. ನೀಚಾತ್ಮಳೇ! ಇಂಥ ಪತಿವ್ರತೆಯನ್ನು ಕಷ್ಟಕ್ಕೆ ಗುರಿಮಾಡಬೇಡ.

ಪದ್ಮಮ್ಮ— ಆಹಹ! ಈ ಮುದುಕನ ಮಾತನ್ನು ಕೇಳಿದರೆ ನನ್ನ ಹೊಟ್ಟೆಯಲ್ಲಿ ಸಾಸ್ವಿಕಾಳು ಹಾಕಿದಹಾಗೆ ಆಗುತ್ತದೆ. ಇಗೋ ಮುದುಡಾ! ನೀನು ಮಾತ್ರ ಇವಳ ಹಿತವನ್ನು ಬಹಯಸಬೇಡ. ಮುಪ್ಪಿನ ಕಾಲಕ್ಕೆ ಬಹಳ ಸಂಕಟ ಬಂದೀತು!

( ನಂಬರ ೨೦ ) ಪದ ರಾಗ–ನಾಂಡಪಹತಿ ತಾಲ–ಕವಾಲಿ

ಮಲ್ಲಮ್ಮ- ಬೇಡ ಬೇಡಾ | ಬೇಡಯನ್ನಾ | ಗೊಡವಿ ನಿನಗೇ |
ಬೇಡಿಕೊಳ್ವೆ ಬಲ್ಲಿದಾ ಈ ನುಡಿಗಳನ್ನು | ನಲ್ಲೆನಾನು |
ಕೇಳಲಾರೆ | ಕೈಲಾಸಾಧಿಪತಿ | ಬಾಲೆಯೆಂದೆನ |
ಲೀಲೆಯಿಂದ | ಪಾಲಿಸುವಾರು ‖ ೧ ‖

ಮಾವನವರೇ, ನನ್ನ ದಸೆಯಿಂದ ವೃಥಾ ಸಂಕಟಕ್ಕೆ ಗುರಿಯಾಗಬೇಡಿರಿ. ಅತ್ತಿಯವರಾದರೂ ಕೇವಲ ಕರುಣ ಮನಸುಳ್ಳವರೇ ಇರುವರು. ಆದರೂ ನನ್ನ ದುರ್ದೈವದಿಂದ ನನ್ನಮೇಲೆ ನಿಷ್ಕರುಣೆಗಳಾಗಿರುವರು.

ಹೇಮರಡ್ಡಿ— ಅವ್ವಾ, ಈ ನಿನ್ನ ಆಚಾರ - ವಿಚಾರಗಳನ್ನು ನೋಡಿ ಸಹಿಸಲಾರದೆ ಈ ನೀಚ ರಾಕ್ಷಸಿಯಂಥ ಹೆಂಗಸರು ನಿನಗೆ ಇಲ್ಲದ ತೊಂದರೆಗಳನ್ನು ಕೊಡುತ್ತಿರುವರು. ಈ ಕಷ್ಟವನ್ನು ನಾನು ಹೇಗೆ ನೋಡಲಿ?

ಮಲ್ಲಮ್ಮ— ಮಾವನವರೇ, ಹಿಂದಿನ ಜನ್ಮದಲ್ಲಿ ನಾನು ಯಾವ ದಂಪತಿಗಳ ಸುಖಕ್ಕೆ ತೊಡರು ಮಾಡಿದ್ದೆನೋ, ಯಾವ ಹೆಣ್ಣಿನ ಬಾಳ್ವೆಗೆ ಅಡ್ಡವಾಗಿದ್ದೆನೋ ಆ ಪಾಪವೇ ಈಗ ಒಂದು ರೂಪವಾಗಿ ಬಂದು ನನ್ನನ್ನು ಪರಿಪರಿಯಿಂದ ಕಾಡುತ್ತಿರುವದು. ಇವರು ನನಗೆ ಶತ್ರುಗಳೆಂದು ಭಾವಿಸಿರುವಿರೋ? ಸುಳ್ಳು; ಸುಳ್ಳು! ನನ್ನ ಪೂರ್ವ ಕರ್ಮವೆಂಬ ಶತ್ರುವನ್ನು ಕೊಲ್ಲುವದಕ್ಕಾಗಿ ತಮ್ಮ ಖಡ್ಗಗಳನ್ನೆತ್ತಿಕೊಂಡು ನಿಂತಿರುವ ಕೇವಲ ನನ್ನ ಮಿತ್ರರು!

ಭರಮರಡ್ಡಿ— ಆಹಹಹಹ! ನನ್ನ ಹೆಣ್ತೆವ್ವನ ಮಾತು ಬಲು ಸಂದಾ-ಬಲು ಸರಿಡ!

(ನಬಂರ ೨೧) ಪದ ರಾಗ- ಸಾರಂಗ ತಾಲ- ಏಕ್ಕಾ

ಪದ್ಮವ್ವ—ನೀನೇಂ ನುಡುವಿಯೋ ಗುಣಹೀನಾ | ನಿನ್ನಯ ಪ್ರಿಯ |
ಮಾಯೇ | ರಂಜಿಸುತ್ತ ನಿಂತಿಹ |
ಕಂಜನೇತ್ರೆಯ ನೋಡಿ | ಗಜಗುಜಿಪೆ ಹೇಡಿ |
ಅಂಜಿ ನೀನು ||೧||

ಎಲೋ ಇವಳ ಮಾತಿಗೆ ಮರುಳಾಗಿ ತಲೆಬಾಗಿಸಿಕೊಂಡು ಕುಳಿತಿರುವೆಯಾ ? ಸರಿಕರಲ್ಲಿ ನಿನಗೆ ನಾಚಿಕೆ ಬರುವದಿಲ್ಲವೆ ? ಹೆಂಗಸಿಗೆ ಅಂಜಿ ನಡೆಯುವ ಗಂಡು ಲೋಕದಲ್ಲಿ ಅಮಾನ್ಯನಲ್ಲವೇನೋ ಮೂರ್ಖಾ ! ಈ ಮಲ್ಲಿಯ ವಿಲಕ್ಷಣವಾದ ಮಾತಿಗಂತೂ ಈ ಮು-ದುಡನು ತಲೆದೂಗುತ್ತಿರುವನು. ಈ ವೃದ್ಧನಂತೆ ನೀನು ತಲೆದೂಗನಾಗಿ ಎಲ್ಲಿಗಾದರೂ ಹೋಗು.

ಭರಮರಡ್ಡಿ— ಏ ಹಣ್ತೆವ್ವಾ, ನಮ್ಮವ್ವನ ಮಾತು ಮೀರಿ ಹೀಂಗಲ್ಲಾ ಮಾಡ್ತಿಯಾ ? ಇಗೋ ನಿನ್ನ ಕೊಂದು ಬಿಡ್ತೇನಿ ನೋಡು !

ಹೇಮರಡ್ಡಿ— ಮಗುವೇ, ಏನದು ? ಈ ವೃದ್ಧ ರಕ್ಕಸಿಯ ಮಾತನ್ನು ಕೇಳಿ ಈ ಮಹಾಪತಿವ್ರತೆಯಾದ ನಿನ್ನ ಪತ್ನಿಯನ್ನು ಕಷ್ಟಕ್ಕೆ ಗುರಿ ಮಾಡಿ ಜನ್ಮ - ಜನ್ಮದಲ್ಲಿ ಬಳಲಬೇಡ. ನಿರಪರಾಧಿಯನ್ನು ನಿರ್ಬಂಧಿಸಿ ಪಾಪವನ್ನು ಸಂಪಾದಿಸಬೇಡ. ನಿನಗೆ ಈ ಮಲ್ಲಮ್ಮನು ಬೇಕಿಲ್ಲದ ಪಕ್ಷದಲ್ಲಿ ಪ್ರಾಣದಿಂದ ಬಿಟ್ಟುಬಿಡು. ಎಲ್ಯಾದರೂ ಜೀವಿಸಿಕೊಳ್ಳಲಿ.

ಪದ್ಮವ್ವ— ಎಲೋ, ವೃದ್ಧ ಬ್ರಹ್ಮರಾಕ್ಷಸನು ಸೇರಿದ ಮನೆಯು ನಾಶವಾಗುವಂತೆ ನೀನು ಸೇರಿದ ಈ ಮನೆಯು ನಾಶವಾಗುವ ಕಾಲವೆ ಪ್ರಾರಂಭವಾಯಿತು. ಇಗೋ ನಾನು ಹೆಂಡತಿಯಲ್ಲಾ—ನೀನು ಗಂಡನಲ್ಲಾ ! ಸುಮ್ಮನೆ ಹೋಗು.

ಹೇಮರಡ್ಡಿ— ಆಹಾ ! ಇಂಥ ನೀಚ ಸ್ತ್ರೀಯರು ತಮ್ಮ ಪಂಥಕ್ಕಾಗಿ ಪತಿಗಳನ್ನು ಕೂಡಾ ನಿರಾಕರಿಸುವರೆಂಬುವ ಮಾತು ಈ ವೃದ್ಧಳ

ವಿಷಯದಲ್ಲಿ ಸಹಜವಾಯಿತು. ಎಲೇ ಪಾತಕ ರಂಡೇ! ನಿನ್ನ ಅಧಿಕಾರದಲ್ಲಿ ಮಾಡತಕ್ಕ ಘೋರಕೃತ್ಯಗಳನ್ನು ಮಾಡಿ ಬಿಡು! ನಿನ್ನ ಆಯುಷ್ಯವು ಸಮೀಪಿಸುತ್ತ ಬರುತ್ತಿರುವದು. ಜಾಗ್ರತೆಯಾಗಿ ಪಾಪವನ್ನು ಸಂಪಾದಿಸಿ ಸೀರೆಯ ಸೆರಗಿನಲ್ಲಿ ಭದ್ರವಾಗಿ ಕಟ್ಟಿಕೋ! ಮುಂದೆ ನಿನ್ನ ಆಪತ್ಕಾಲಕ್ಕೆ ಬೇಕಾಗುವದು. ಭರಮರಡ್ಡಿ, ವಿಚಾರ ಮಾಡು. ಅನ್ಯಾಯಕ್ಕೆ ಮನಸ್ಸುಕೊಟ್ಟು ಪರಮಕ್ಕಳಿಗೆ ಕಷ್ಟವನ್ನು ಕೊಡಬೇಡ!

ಭರಮರಡ್ಡಿ— ಅಪ್ಪಾ, ಎಲೇ ಅಪ್ಪಾ! ನಿನ್ನಮಾತು ಕೇಳೋದಿಲ್ಲಾ. ನಮ್ಮವ್ವನ ಮಾತು ಕೇಳೋದೆ ಸೈ! .

ಹೇಮರಡ್ಡಿ— ಅಹಾ! ನಾನು ಈಗ ಇವನಿಗೆ ಏನು ಹೇಳಿದರೂ ನಿಷ್ಫಲವಾಗುತ್ತದೆ. ನಾನು ಇಲ್ಲಿದ್ದು ಈ ಕಷ್ಟವನ್ನು ನೋಡುವದಕ್ಕಿಂತಲೂ ದನ ಕಟ್ಟುವ ಮನೆಯಲ್ಲಿ ಹೋಗಿ ಕುಳಿತುಕೊಳ್ಳುವದೇ ಲೇಸು. ಸುಮ್ಮನೆ ಹೋಗುವೆನು.

ಭರಮರಡ್ಡಿ— ಅವ್ವಾ! ನಾನು ಪಟ ಆಡ್ಸಾಕೆ ಹೋಗ್ತೇನಿ. ಈ ಹಡ್ತೆವ್ವನ ಕಳಿಸಿ ಬಿಡು.

ಮಲ್ಲಮ್ಮ— ಅತ್ತಿಯವರೇ, ಪತಿಯ ಆಜ್ಞೆಯು ಆಯಿತು. ಮಾವನಾದರೂ ಸಮ್ಮತಿಸಿದನು. ನಿಮ್ಮ ಆಜ್ಞೆಯಂತೂ ಮೊದಲೇ ಆಗಿರುವದು. ಆದರೆ ನಾನು ಎಲ್ಲಿಗೆ ಹೋಗಬೇಕು? ಇರುವ ಸ್ಥಳವಾವುದು? ಇನ್ನೊಂದಾವರ್ತಿ ಆಜ್ಞೆಯನ್ನು ಮಾಡಿದರೆ ನಿಮ್ಮ ಆಜ್ಞೆಯನ್ನು ಮಸ್ತಕದಮೇಲೆ ಹೊತ್ತುಕೊಂಡು ಈ ಅಕ್ಕಂದಿರ ಉಪಕಾರವನ್ನು ಸ್ಮರಿಸುತ್ತ ಪ್ರಯಾಣ ಮಾಡುವೆನು. ಅಪ್ಪಣೆಯಾಗಲಿ.

ಪದ್ಮಮ್ಮ— ಪುನಃ ಪುನಃ ಆಜ್ಞೆಯನ್ನು ಕೇಳುವಿಯಾ? ಗೈಯ್ಯಾಳಿ! ಇಗೋ ನಿನಗೆ ನೀರು ಕುಡಿಯುವದಕ್ಕಾಗಲಿ, ಉಣ್ಣುವದಕ್ಕಾಗಲಿ ಈ ಒಡಕ ಗಡಿಗೆಯನ್ನು ಕೊಟ್ಟಿರುವೆನು. ತೆಗೆದುಕೊಂಡು ಹೋಗು.

(ನಂಬರ ೨೨) ಪದ ರಾಗ- ಭೈರವಿ ತಾಲ- ಕೇರವ

ಮಲ್ಲಮ್ಮ—ನಾಂ ಪೋಗೀ ಜರ್ಪೆ ನಾರಿಯುರೆ ಬೇಡುವೆ ಮೋದದೀ

ಸಲೆ ಸಾರ್ಥಕ ಮಾಡುವೆ ಕಾಯಾ ತೊಲಗುವೆ ಭವಮಾ-
ಯಾಂಬುಧಿಯ | ವನವಾಸಕೆ ಪೋಗುವೆ ನಾನು |
ಬೇಡುವೆ ಮೋದದಿ ||೧||

ಅಕ್ಕಗಳಿರಾ, ನಾನು ಈ ಮಂದಿರವನ್ನು ಬಿಟ್ಟು ಹೋಗುವೆನು. ಏನಾದರೂ ಅಪರಾಧ ಮಾಡಿದ್ದರೆ ಮನಸ್ಸಿನಲ್ಲಿ ತರಬೇಡಿರಿ.

(ಮೇಲಿನ ಪದವನ್ನು ಹಾಡುತ್ತ ಹೋಗುವಳು.)

( ಈಶ್ವರನ ಪ್ರವೇಶ )

(ನಂಬರ ೨೩) ಪದ ರಾಗ– ಭೈರವಿ ತಾಲ– ದಾದರಾ

ಪ್ರೇಮದಿಂದ ನುಡಿವಳ್ ಆ ಮಹಾತ್ಮಳು |
ಪ್ರೇಮದಿಂದ ಪೋಗಿ | ಕಾಮಿತಾರ್ಥವ ನೀಯ್ವೆ ||
ನಾರಿ ಮಲ್ಲಮ್ಮ ತಾ | ಘೋರ ತಾಪದಿಂದ |
ಕ್ರೂರವಾದರಣ್ಯ ಸೇರುವಳು ಈಗಾ ||೧||

ಆಹಾ ! ನನ್ನ ಮುಗ್ಧ ಭಕ್ತಳಾದ ಮಲ್ಲಮ್ಮನಿಗೆ ಅತ್ತೆಯು ಪ್ರತಿ ನಿತ್ಯದಲ್ಲಿಯೂ ಐದು ಗಿಡ್ನ ಜೋಳವನ್ನು ಬೀಸಬೇಕೆಂದು ಕಠಿಣ ವಾದ ಆಜ್ಞೆಯನ್ನು ಮಾಡಿದ್ದನ್ನು ಕಂಡು ನಾನೇ ಹೋಗಿ ಜೋಳ ವನ್ನು ಬೀಸಿ, ಆ ಕಷ್ಟವನ್ನು ಪರಿಹರಿಸಿದರೂ ಅದಕ್ಕಿಂತಲೂ ಈಗ ಅಧಿಕವಾದ ಕಷ್ಟವು ಪ್ರಾಪ್ತವಾಗಿರುವದು. ಏನರಿಯದ ಬಾಲಿಕೆಗೆ ಅಡವಿಯಲ್ಲಿ ಗೋವುಗಳನ್ನು ಕಾದು ಶಗಣೆಯನ್ನು ಹಿಡಿದು ತಿಪ್ಪಿ-ಯನ್ನು ಮಾಡಬೇಕೆಂದು ಅತ್ತೆಯು ಆಜ್ಞೆಯನ್ನು ಮಾಡಿರುವಳಲ್ಲ! ಈ ಆಜ್ಞೆಯನ್ನು ಮಲ್ಲಮ್ಮನು ಹೇಗೆ ಪಾಲಿಸಬೇಕು? ನೋಡಿದರೆ ನಿತ್ಯದಲ್ಲಿಯೂ ಸ್ನಾನವನ್ನು ಮಾಡುತ್ತಿರುವಳು. ಲಿಂಗದರ್ಶನವಿಲ್ಲದೆ ನಿದ್ರೆಯನ್ನು ಮಾಡುವದಿಲ್ಲ. ಇಂಥ ಆಚಾರವತಿಯು ಕಾಡಡವಿ ಯಲ್ಲಿ ಹೇಗೆ ವರ್ತಿಸಬೇಕು ? ಕಾರಣ ಆ ದನವಿನ ಹಟ್ಟಿಯ ಸಮೀ ಪದಲ್ಲಿ ನಾನೇ ಹೋಗಿ ಲಿಂಗಾಕಾರವಾಗಿ ಕುಳಿತು, ಮಲ್ಲಿಕಾರ್ಜುನ ನೆಂಬ ನಾಮಧೇಯವನ್ನು ಮಾಡಿಕೊಂಡು ಜಡೆಯಲ್ಲಿರುವ ಗಂಗೆ-ಯನ್ನು ಸರೋವರವಾಗಿ ಮಾಡಿ ಪಾತಾಳ ಗಂಗೆ ಎಂಬ ಹೆಸರನ್ನಿಟ್ಟರೆ

ಆ ಮಹಾತ್ಮಳ ಸ್ನಾನಾದಿ ನಿತ್ಯಕರ್ಮಕ್ಕೂ ಲಿಂಗದರ್ಶನಕ್ಕೂ ಅನು ಕೂಲವಾಗುವದು. ಕಾರಣ ಈ ವಿಷಯವನ್ನು ಮಲ್ಲಮ್ಮನಿಗೆ ತಿಳು ಹಿಸಲು ಆ ಪತಿವ್ರತೆಯಾದ ಭಕ್ತಳ ದರ್ಶನಕ್ಕೆ ನಾನೇ ಹೋಗುವೆನು.

( ಮಲ್ಲಮ್ಮನ ಪ್ರವೇಶ )

ಮಲ್ಲಮ್ಮ— ಪರಮಾತ್ಮನ ಲೀಲೆಯು ಬಹು ವಿಚಿತ್ರವಾಗಿರುವದು. ನಾನಾದರೂ ಶಿವಸೇವೆಗಾಗಿ ಈ ಮಾನವ ಜನ್ಮವನ್ನು ಎತ್ತಿರುವೆನು. ಕಾರಣ ಶಿವನಿಗೆ ಅರ್ಪಿತವಾಗದ ಈ ಅನ್ನವನ್ನು ಹೇಗೆ ತೆಗೆದುಕೊ ಳ್ಳಲಿ ? ಈ ತಂಗಳ ಅಂಬಲಿಯನ್ನು ಇಷ್ಟಪ್ರಾಣ ಭಾವಲಿಂಗಗಳಲ್ಲಿ ಯಾವ ಲಿಂಗಕ್ಕೆ ನೈವೇದ್ಯಮಾಡಲಿ ? ನಾನು ಮಾರ್ಗವನ್ನೇ ಅರಿಯ ದವಳು. ಎಲ್ಲಿಗೆ ಹೋಗಲಿ. ಭೋ ! ಶಿವನ ಅರ್ಧಾಂಗಿನಿಯಾದ ಭಗವತಿ, ಈ ಕಾಲದಲ್ಲಿ ನನಗೆ ನೀನೇ ಗತಿಯಲ್ಲದೆ ಬೇರೆ ಗತಿಯಿಲ್ಲ!

(ನಂಬರ ೨೪) ಪದ ರಾಗ- ದಕ್ಷಿಣಾದಿ ತೋಡಿ ತಾಲ- ಆದಿ

ಪರಮಪಾವನೇ ಪಾಹಿ | ವರಕಾಳಿ ದೇವಿ || ಪ ||

ದುರಿತೌಘಮದ ಸಂಹರೆ | ಚರಣಾಬ್ಜದೋಳು ನಾ |
ಅಮರವಿನುತೆ | ವಿಮಲಚರಿತೆ | ಕರುಣಭರತೆ ||
ಕ್ಷಮಕಾಂತೇ || ೧ ||

( ಹೇಮರಡ್ಡಿ ಪ್ರವೇಶ )

ಹೇಮರಡ್ಡಿ— ತಾಯಿ ಮಲ್ಲಮ್ಮ, ನಿಲ್ಲು ನಿಲ್ಲು ! ನೀನು ಬಂದಂದಿನಿಂದ ನನ್ನ ಮನೆಯ ದಾರಿದ್ರ್ಯವೆಲ್ಲಾ ಕಳೆದು,ಸಕಲ ಸುಖಸಂಪದಗಳನ್ನು ಕಂಡೆನು. ಇಂಥ ಪುಣ್ಯಾತ್ಮಳಾದ ನಿನ್ನನ್ನು ಕಾಡಿಗೆ ಹೇಗೆ ಕಳು ಹಲಿ? ಅವ್ವಾ ಮಲ್ಲಮ್ಮಾ, ಸಂಕಟದಿಂದ ಇವರ ಐಶ್ವರ್ಯವು ನಾಶ ವಾಗಿ ಹೋಗಲೆಂದು ಶಾಪವನ್ನು ಮಾತ್ರ ಕೊಡಬೇಡ. ಕೈಮುಗಿದು ಬೇಡುವೆನು. ನಿನ್ನಂಥ ಪತಿವ್ರತೆಯ ಶಾಪವು ಯಾವ ದೇವತೆ ಗಳನ್ನು ಮೊರೆಹೊಕ್ಕರೂ ಬಿಡಲಾರದು.

ಮಲ್ಲಮ್ಮ— ಮಾವನವರೇ, ನಿಮ್ಮ ಪಾದಸೇವೆಯನ್ನು ಮಾಡಿ ಜನ್ಮ ಸಾರ್ಥಕವನ್ನು ಮಾಡಿಕೊಳ್ಳಬೇಕೆಂಬ ನನ್ನ ಉದ್ದೇಶವು ಭಂಗ

ವಾಯಿತು. ಅಕ್ಕಂದಿರು ಹೊರಿಸಿರುವ ದುರ್ದೋಷವೆಂಬ ತೃಣ ವನ್ನು ನನ್ನ ಪಾತಿವ್ರತ್ಯವೆಂಬ ಬೆಂಕಿಯಿಂದ ಸುಡಬೇಕೆಂದು ಅಗ್ನಿ ಯನ್ನು ಮುಷ್ಟಿಯಲ್ಲಿ ಹಿಡಿದುಕೊಂಡು ಗೋ ಸೇವೆಯನ್ನು ಮಾಡಿ, ಆರ್ಯ ಮಾತೆಯರ ಋಣವನ್ನು ತೀರಿಸಿ ಶಿವ ಸೇವೆಯಲ್ಲಿಯೇ ಆಯುಷ್ಯವನ್ನು ಕಳೆಯಬೇಕೆಂದು ಹೊರಟಿರುವೆನು. ನಿಮ್ಮ ಪಾದಕ್ಕೆ ವಂದಿಸಿ ಬೇಡಿಕೊಳ್ಳುವೆನು. ನೀವು ಸುಮ್ಮನೆ ಮನೆಗೆ ಹೋಗಿರಿ.

ಹೇಮರಡ್ಡಿ— ಅವ್ವಾ, ನನ್ನ ಮನೆಯನ್ನು ಉದ್ಧಾರ ಮಾಡಿದ ನಿನಗೆ ಇಂಥ ಕಷ್ಟವನ್ನು ಕೊಟ್ಟಿರುವ ಹೇಮರಡ್ಡಿಯ ಜನ್ಮವೇ ಪಾಪಿ! ನ್ಯಾಯ - ಅನ್ಯಾಯ ವಿಚಾರ ಮಾಡದೆ ಕೇವಲ ಶಿವ-ಶರಣಿಯಾದ ನಿನ್ನ ಮನಸ್ಸನ್ನು ನೋಯಿಸಿದ ನನ್ನ ಕುಟುಂಬ ವರ್ಗವೇ ನನಗೆ ವೈರಿಯಾಗಿರುವದು. ನೀನು ಬಿಟ್ಟು ಬಂದ ಆ ನನ್ನ ಗ್ರಹವು ನನ್ನ ಪಾಲಿಗೆ ಸ್ಮಶಾನವಾಗಿರುವದು! ನಿನ್ನಂಥ ಪುಣ್ಯಾತ್ಮಳ ಅಗಲುವಿಕೆ ಯಿಂದ ನನ್ನ ಪುಣ್ಯವೆಂಬ ತೈಲವು ಮುಗಿದು ಐಶ್ವರ್ಯವೆಂಬ ಜ್ಯೋತಿಯೇ ಆರಿಹೋದಂತಾಗಿರುವದು!

ಮಲ್ಲಮ್ಮ— ಮಾವನವರೇ, ಈ ನನ್ನ ಹವ್ಯಾಸಕ್ಕೆ ತಾವು ಬೀಳುವದ ರಿಂದ ಪ್ರಯೋಜನವಿಲ್ಲ. ಮನೆಯವರಲ್ಲಿ ನೀವು ಹಿತವಂತರಾಗಿದ್ದು ಸುಶ್ರೂಷೆಯನ್ನು ನಡೆಯಿಸಿಕೊಳ್ಳಿರಿ.

(ನಂಬರ ೨೫) ಪದ ರಾಗ– ಭೂಪ ತಾಲ- ತ್ರಿತಾಲ

ಹೇಮ— ಸದುಹೃದಯೇ ಮಲ್ಲವ್ವಾ |
ಮುದದಿ ನೋಡೆ ನಿನ್ನ ಹೃದಯದ ಸಂಕಟ |
ದೀನರಕ್ಷಕ ಕನಿಕರದಿಂದಾದರಿಸು ಈ ದೇವಿಯ ||೧||

ಅಮ್ಮಾ, ಇಂಥವರಿಂದ ಸುಶ್ರೂಷೆಯನ್ನು ಹೊಂದಿ ಇನ್ನು ಎಷ್ಟು ದಿವಸ ಬದುಕಲಿ? ಪಾಪಿಯಾಗಿ ಹುಟ್ಟಿ, ಪಾಪ ದೃಷ್ಟಿಯಲ್ಲಿ ಇದ್ದು ಪಾಪ ಕೃತ್ಯವನ್ನು ನೋಡುವ ಹೇಮರಡ್ಡಿಯ ಜನ್ಮಕ್ಕೆ ಧಿಕ್ಕಾರ! ಧಿಕ್ಕಾರ!! ತಾಯಿ ಮಲ್ಲಮ್ಮ ಹೋಗು. ನಿನ್ನನ್ನು ಕಷ್ಟಕ್ಕಿಟ್ಟ ಈ ಪಾಪಿಯನ್ನು ನೋಡಿ ಮರುಗಬೇಡ. ಪ್ರಚಂಡವಾದ ಸೂರ್ಯ

ಕಿರಣಗಳಿಂದ ಬೆಂದು ಕಾದ ಕಬ್ಬಿಣದಂತಿರುವ ಈ ಮಾರ್ಗದಲ್ಲಿ ನೀನು ಹೇಗೆ ಪ್ರಯಾಣ ಮಾಡುವಿ ?

ಮಲ್ಲಮ್ಮ— ಮಾವನವರೇ, ದೇಶಕಲ್ಯಾಣಕ್ಕಾಗಿ ಸಂಚರಿಸುವ ಸೂರ್ಯನಾರಾಯಣನು ನನ್ನೊಬ್ಬಳಿಗೆ ಅಹಿತವನ್ನು ತೋರುವನೇ ? ನಶ್ವರವಾದ ಈ ಶರೀರದ ಸುಖ - ದುಃಖಗಳೆಲ್ಲ ಮಿಥ್ಯವಲ್ಲವೇ ? ಗರ್ಭದಿಂದ ಉದ್ಭವಿಸಿದ ಪ್ರಾಣಿಯು ದರಿದ್ರನಾಗಲಿ, ಧನಿಕನಾಗಲಿ ಸುಖ - ದುಃಖಗಳನ್ನು ಸಮನಿಸಿ ಅನುಭವಿಸಲಿಕ್ಕೇ ಬೇಕು. ದರಿದ್ರನಿಗೆ ಒಂದು ತರಹದ ತಾಪ, ಧನಿಕನಿಗೆ ಒಂದು ತರಹದ ತಾಪ ಇರಲಿಕ್ಕೇ ಬೇಕೆಂದು ಸೃಷ್ಟಿಯ ನೇಮವಿರುವದು. ಮನುಷ್ಯನಿಗೆ ಕಷ್ಟವೇ ಶಾಶ್ವತವೆಂದು ತಿಳಿದು ನನಗೆ ಆಶೀರ್ವಾದ ಮಾಡಿ ಮಂದಿರಕ್ಕೆ ಹೋಗಿರಿ.

ಹೇಮರಡ್ಡಿ— ಅವ್ವಾ, ನಿನಗೆ ಏನೆಂದು ಆಶೀರ್ವಾದವನ್ನು ಮಾಡಲಿ? ಹೋಗು ತಾಯಿ, ಹೋಗು. ಅರಣ್ಯದಲ್ಲಿ ಭಗವಂತನು ನಿನ್ನನ್ನು ರಕ್ಷಿಸಲಿ !

(ನಂಬರ ೨೬) ಪದ ರಾಗ— ಕೇದಾರಗೌಳ ತಾಲ- ಝಂಪಾ

ಮಲ್ಲಮ್ಮ—ಮಾರ ಸಂಹರ | ಪರಮ ಮಹಾತ್ಮನೇ |
ಕರುಣಿಸೋ ಗೌರೀ ರಮಣ | ಅಂಧಕಾರಣ್ಯದಲ್ಲಿ |
ತಂದು ಬಿಟ್ಟೆಯಲ್ಲೋ ಇಲ್ಲಿ |
ಬಂದು ಕಾಯೋ ಶೀಘ್ರದಲ್ಲಿ ||೧||

(ನಂಬರ ೨೭) ಪದ ರಾಗ— ಕಾಲಾಂಗಡ ತಾಲ- ಬಿಲಂಪಿ

ಹೇಮ— ತಡಮಾಡದೆ ಪೋದಿಯೆನೀ ಶರಣೆ |
ಕಾಡನು ಸೇರಿದೆಯಾ । ಜರಾವಸ್ಥೆಯೊಳ್ |
ನೀನೇ ಯನಗೆ | ಆಧಾರಳಲ್ಲವೇ |
ಗುಣಶೀಲೆ ಪಾಪಮತಿಯುತೆ ನಿರ್ಮಲಕಾಯೆ ||೧||

ಶಿವ ಶಿವಾ ! ಮಲ್ಲಮ್ಮನಿಗೆ ಕಾಡಾರಣ್ಯವೇ ಶೃಂಗಾರವಾದ ಪಟ್ಟಣವಾಯಿತು. ಅಂಬಲಿಯೇ ಅಮೃತವಾಯಿತು. ಮಲ್ಲಮ್ಮನು

ಅಡವಿಗೆ ಹೋಗೇ ಬಿಟ್ಟಳು! ಇನ್ನೇನಿದೆ ನನ್ನ ಸಂಪತ್ತೇ ಬಯಲಾ ಯಿತು! ನನ್ನ ಜಯಲಕ್ಷ್ಮಿಯು ತೊಲಗಿದಳು. ತಾನಾಗಿ ತೊಲಗ ಲಿಲ್ಲ—ನಾನಾಗಿ ದೂಡಿದೆನು. ಉದರ ಪೋಷಣೆಗಾಗಿ ಮನೆಯನ್ನು ಸೇರಬೇಕಾಯಿತು. ಯತ್ನವಿಲ್ಲ. ಹೋಗಿ ಮನೆಯನ್ನು ಸೇರುವೆನು.

ಮಲ್ಲಮ್ಮ— ಅಹಾ! ನಾನು ಎಷ್ಟು ದೂರ ಬಂದರೂ ಆ ಕುಟಿರವೇ ಕಾಣಲಿಲ್ಲ. ಹುಟ್ಟಿದಂದಿನಿಂದ ಮಾರ್ಗವನ್ನೇ ಕಾಣದವಳು. ಎಲ್ಲಿ ಹೋಗಲಿ? ಯಾರನ್ನಾದರೂ ಕೇಳಬೇಕೆಂದರೆ ಈ ಅರಣ್ಯದಲ್ಲಿ ಯಾರೂ ಇಲ್ಲ. ಭೋ ಮಲ್ಲಿಕಾರ್ಜುನಾ! "ತ್ವಮೇವ ಮಾತಾಚ ಪಿತಾತ್ವಮೇವ ತ್ವಮೇವ ಭ್ರಾತಾಚ ಸಖಾತ್ವಮೇವ" ಎಂಬಂತೆ ಅನಾಥಳಾದ ನನಗೆ ನೀನೇ ತಾಯಿ — ತಂದೆ — ಬಂಧು — ಬಳಗ ಸ್ವರೂಪನಾಗಿರುವಿ. ಆದ್ದರಿಂದ ಆ ಕುಟೀರದ ಮಾರ್ಗವನ್ನು ತೋರಿಸಿ ನನ್ನನ್ನು ರಕ್ಷಿಸು ರಕ್ಷಿಸು. ಅಹಾ! ಇಲ್ಲಿ ಯಾರೋ ಶಿವಯೋಗಿ ಗಳು ಬರುತ್ತಿರುವರು. ಅವರನ್ನು ವಿಚಾರಿಸುವೆನು.

ಸ್ವಾಮಿ, ಈ ಅನಾಥಳು ವಂದಿಸುವಳು.

ಜಂಗಮ— ಅಮ್ಮಾ, ನೀನು ಯಾರು?

ಮಲ್ಲಮ್ಮ— ಸ್ವಾಮಿ, ನಾನು ಈ ಸಿದ್ಧಾಪುರದ ಹೇಮರಡ್ಡಿಯ ಸೊಸಿ ಯಳು. ನನ್ನನ್ನು ಮಲ್ಲಮ್ಮನೆಂದು ಕರೆಯುತ್ತಿರುವರು.

ಜಂಗಮ— ಸಿದ್ಧಾಪುರದ ಹೇಮರಡ್ಡಿಯ ಸೊಸಿಯಳಾದ ಮಲ್ಲಮ್ಮ ಎಂಬವಳು ನೀನೋ ತಾಯಿ. ಈ ಅರಣ್ಯ ಮಾರ್ಗವನ್ನು ಹಿಡಿದು ಹೋಗುತ್ತಿರುವೆಯಲ್ಲ ಎಲ್ಲಿಗೆ ಹೋಗುವಿ?

ಮಲ್ಲಮ್ಮ— ಸ್ವಾಮಿ, ಊರ ಹೊರಗಿರುವ ದನವಿನ ಹಟ್ಟಿಗೆ ಹೋಗು ತ್ತಿರುವೆನು.

ಜಂಗಮ— ಅಮ್ಮಾ, ಇದು ನಿನ್ನ ಬುದ್ಧಿಯೋ, ಹೀಗೆ ಹೋಗೆಂದು ನಿನಗೆ ಯಾರಾದರೂ ಆಜ್ಞೆಯನ್ನು ಮಾಡಿರುವರೋ?

ಮಲ್ಲಮ್ಮ— ಸ್ವಾಮಿ, ನಾನು ಸ್ವಬುದ್ಧಿಯಿಂದ ಹೋಗಲಿಕ್ಕೆ ಸ್ವತಂತ್ರ ಳಲ್ಲ. ನನಗೆ ಅತ್ತೆಯೂ ಮಾವನೂ ಗಂಡನೂ ಕೂಡ ಇರುವರು.

ಜಂಗಮ— ತಾಯಿ, ನೀನು ಹೇಳುವದನ್ನು ಕೇಳಿದರೆ ಕೇವಲ ಗ್ರಹಸ್ಥಾಶ್ರಮಿಯಾಗಿರುವಿ. ಆ ದನವಿನ ಹಟ್ಟಿಯಲ್ಲಿ ಇರುವದಕ್ಕೆ ನಿನಗೆ ವಾಸಸ್ಥಾನವಾದರೂ ಎಲ್ಲಿರುವದು ?

ಮಲ್ಲಮ್ಮ— ಅದರಲ್ಲಿ ಒಂದು ಹುಲ್ಲು ಗುಡಿಸಲು ಇರುವದಂತೆ. ಅದರಲ್ಲಿದ್ದು ಗೋವುಗಳನ್ನು ಕಾಯುತ್ತ ಶಗಣಿಯನ್ನು ಹಿಡಿದು ತಿಪ್ಪಿಯನ್ನು ಮಾಡೆಂದು ಅತ್ತಿಯವರು ನನಗೆ ಆಜ್ಞೆಯನ್ನು ಮಾಡಿರುವರು.

ಜಂಗಮ— ‖ ಪದ್ಯ ‖ ಮಲಗುವಾಸನವಿಲ್ಲವೇನವ್ವ । ಹೊದಿವ ಹಚ್ಚಡವಿಲ್ಲ । ತಲೆಗಿಂಬುಯಿಲ್ಲ । ಮತ್ತೊಂದು ಕುಪ್ಪಸವಿಲ್ಲ । ಹೊಳೆವ ಮಂಗಲ ಸೂತ್ರವಲ್ಲದಿನ್ನೊಂದಿಲ್ಲ ಬೇಡಲಿಕ್ಕೆ ಬಾಯಿಲ್ಲವೇ ತಲೆಗೆ ಸ್ನೇಹಮದಿಲ್ಲಾ । ಮರುಗುತಿಪ್ಪವರಿಲ್ಲ। ಪೊರೆವವರಾರುಮಿಲ್ಲಂ ನಿಲಯದೊಳು । ಕೈಗೆಬಳೆಗಲ್ಲೀಪರಿಯವಸ್ಥೆಯಂಗೈದ ಅತ್ತಿಯ ಮನಂ ಕದಡಲಿಲ್ಲೇ ‖ ೧ ‖

ಅವ್ವಾ, ನಿನ್ನ ಅತ್ತೆ ಮಾವಂದಿರು ಕೇವಲ ಗ್ರಹಸ್ಥಾಶ್ರಮಿಗಳಾಗಿ ಎಂಥಾ ವಿರುದ್ಧವಾದ ಕಾರ್ಯವನ್ನು ಆಚಾರಿಸಿರುವರು. ಅಯ್ಯೋ! ಯವ್ವನವತಿಯಾದ ನಿನ್ನನ್ನು ಇಂಥ ಅವಸ್ಥೆಯಿಂದ ಅರಣ್ಯಕ್ಕೆ ಕಳುಹಿಸುವದು ಯೋಗ್ಯವೇ? ಹೊದಿಯುವದಕ್ಕೆ ಒಂದು ಹರಕು ಕಂಬಳಿಯನ್ನಾದರೂ ಕೊಡಲಿಲ್ಲವೇ? ಅತ್ತಿಯಾದರೂ ಇಂಥ ಕಠಿಣವಾದ ಆಜ್ಞೆಯನ್ನು ಮಾಡುವದಕ್ಕೆ ನೀನು ಅವರಿಗೆ ಮಾಡಿದ ದ್ರೋಹವೇನು?

ಮಲ್ಲಮ್ಮ— ಸ್ವಾಮಿ, ಲಿಂಗಪೂಜೆ ಇಲ್ಲದೆ ನಾನು ಊಟವನ್ನೇ ಮಾಡುತ್ತಿರಲಿಲ್ಲ. ಇದನ್ನು ನೋಡಿ ನಗೆವೆಣ್ಣೆಯರು ಸಹಿಸಲಾರದೆ ಅತ್ತಿಯವರ ಮುಂದೆ ಇಲ್ಲದ ಮಾತುಗಳನ್ನು ಹೇಳಿ ದೋಷಾರೋಪವನ್ನು ಕಲ್ಪಿಸಿದರು. ಕಾರಣ ಅತ್ತಿಯವರು ನನ್ನನ್ನು ಮನೆಯಿಂದ ಹೊರಗೆ ಕಳಿಸಿದರು.

ಜಂಗಮ— ಅಮ್ಮಾ, ನಿನ್ನ ಸದಾಚಾರವನ್ನು ನೋಡಿ ಸಹಿಸಲಾರದೆ ಅತ್ತಿಯು ನಿನ್ನನ್ನು ಇಂಥ ಕಷ್ಟಕ್ಕೆ ಗುರಿಮಾಡಿರುವಳೇ? ಅಸ್ತು. ಇಗೋ ಆ ದನವಿನ ಹಟ್ಟಿಯ ಸಮೀಪದಲ್ಲಿ ಒಂದು ಶಿವಲಿಂಗವಿರುವದು. ಆ ಶಿವಲಿಂಗದ ಬದಿಯಲ್ಲಿ ಒಂದು ಸರೋವರವು ಇರುವದು. ಅಲ್ಲಿ ನಿನ್ನ ಆಚಾರವು ಅನುಕೂಲವಾಗಿ ನಡೆಯುವದು ಹೋಗು. ಆ ಮಲ್ಲಿಕಾರ್ಜುನನೇ ನಿನ್ನನ್ನು ಕಾಪಾಡುವನು.

ಮಲ್ಲಮ್ಮ— ಆಗಲಿ. ಮಹನೀಯರ ವಾಕ್ಯವು ಎಂದಿಗೂ ಸುಳ್ಳಾಗಲಾರದು.

ಜಂಗಮ— ತಾಯಿ, ಮಹನೀಯರ ವಾಕ್ಯವು ಸುಳ್ಳಾದರೂ ಆಗಬಹುದು; ಸೂರ್ಯ-ಚಂದ್ರರು ತಮ್ಮ ಗತಿಗಳನ್ನು ತಪ್ಪಿ ನಡೆದರೂ ನಡೆಯಬಹುದು; ಒಂದು ವೇಳೆ ಈ ಭೂಮಿಯೂ ಆಕಾಶವೂ ಏಕೀಭವಿಸಿದರೂ ಭವಿಸಬಹುದು ಆದರೆ ಈ ಪತಿವ್ರತೆಯರ ಶಾಪವು ಮಾತ್ರ ಎಂದಿಗೂ ವ್ಯರ್ಥವಾಗಲಾರದು! ಇಂಥ ಪತಿವ್ರತೆಯರಿಗೆ ನಿಷ್ಕಾರಣವಾಗಿ ದೋಷವನ್ನು ಹೊರಿಸಿದ ನೀಚರಿಗೆ ತಕ್ಕ ಪ್ರಾಯಶ್ಚಿತ್ತವಾಗಿ, ಪತಿವ್ರತೆಯರ ಕೀರ್ತಿಯು ಜಗತ್ತಿನಲ್ಲಿ ಸ್ಥಿರವಾಗಿ ಉಳಿಯುವಂತೆ ಮಾಡುವೆನು. ಇಗೋ ಆ ಮಲ್ಲಿಕಾರ್ಜುನ ಲಿಂಗದರ್ಶನವನ್ನು ಮಾಡಿಸುವೆನು ಭಯಪಡಬೇಡ (ಎಂದು ತೋರಿಸಿ) ಅವ್ವಾ ಈತನೇ ಮಲ್ಲಿಕಾರ್ಜುನನು ನೀನು ಸುಖವಾಗಿರು.ನಾನು ಹೋಗುವೆನು.

ಜಂಗಮ— ಮಲ್ಲಮ್ಮನಿಗೆ ಲಿಂಗದರ್ಶನ ಮಾಡಿಸಿದಂತಾಯಿತು. ನಾನು ವೃದ್ಧ ಜಂಗಮನಾಗಿ ಹೇಮರಡ್ಡಿಯ ಮನೆಯನ್ನು ಪ್ರವೇಶ ಮಾಡಿ ಆ ಸ್ತ್ರೀಯರ ಮನಸ್ಸನ್ನು ಪರೀಕ್ಷೆಮಾಡಲು ಹೊರಟು ಹೋಗುವೆನು.

(ನಂಬರ ೨೮) ಪದ ರಾಗ–ಭೂಪ ತಾಲ–ತ್ರಿತಾಲ

ಮಲ್ಲಮ್ಮ— ‖ ಪದ್ಯ ‖ ವರವೀರಶೈವ ಶಿವಯೋಗಿಯ | ವರಕಾ
ರುಣ್ಯದಿಂದವತರಿಸಿದ | ವರಮಲ್ಲಿಕಾರ್ಜುನ ಲಿಂಗವನು |
ಕಂಡು ಧನ್ಯಳಾದೆನು ನಾ ‖೧‖

ಎನಿತು ಬಣ್ಣಿಪೆ ನಾ | ಹರಮಂದಿರದಾ |
ಮಹಾವಿಭವನು | ಸಾರಸದೆಡೆಯೊಳ್ |
ತೋರಿದ ಲಿಂಗದ | ವೀರಿದ ರೂಪವನು ||೨||

ಪ್ರಥಮಾಂಕ ಸಮಾಪ್ತ.

---

# — ದ್ವಿತೀಯಾಂಕ —

## ೧ ನೇ ಪ್ರವೇಶ

( ನಾಗಮ್ಮ – ಲಿಂಗಮ್ಮ )

(ನಂಬರ ೨೯ ) ಪದ ರಾಗ – ಭೈರವಿ ತಾಲ – ತ್ರಿವಾಟ

ಮಲ್ಲವ್ವನ ಬಾಳ್ವೆ ವ್ಯರ್ಥಗೈದೆವಾಂ |
ಆ ಪಾಪಿ ನಾರಿಯಳ ಬಾಳ್ವೆಯ | ಅವಳ ಬಾಳ್ವೆ ||

ಪತಿಯ ಪಾದವ | ಪೂಜಿಸುತಲಿ ತಾ |
ಗೃಹಕೆ ಬರ್ಪ | ಅತಿಥಿಗಳಾಧ್ವನಿ ಕೇಳುತಲಿ |
ಚಿತ್ತದಿ ಸತ್ಪ್ರೀತಿಗೈಯ್ಯುತಲಿ | ಅವಳ ಬಾಳ್ವೆ ||೧||

ನಾಗಮ್ಮ— ತಂಗೀ ನಾವು ಹೀಗ ಮಾಡಿದ್ದರಿಂದಲೇ ಅತ್ತೆಯವರು ಆ ಮಲ್ಲಮ್ಮನನ್ನು ಮನೆಬಿಟ್ಟು ಹೊರಗೆ ಹಾಕಿದರು.

ಲಿಂಗಮ್ಮ— ಅಕ್ಕಾ, ಹೊರಗೆ ಹಾಕಿ ದನಗಳನ್ನು ಕಾಯುವದಕ್ಕೆ ನೇಮಿಸಿರುವದು ಹಾಗಿರಲಿ ಶಗಣಿಯನ್ನು ಕೂಡಿ ಹಾಕಬೇಕೆಂದು ಹೇಳಿದ್ದು ನನಗೆ ಬಹಳೇ ಸಂತೋಷ !

ನಾಗಮ್ಮ— ಹೌದು! ಅವಳು ಕಾಡಿಗೆ ಹೋಗಬೇಕಾದರೆ ಗಂಡನು ಸುಮ್ಮನಿದ್ದನೇ ?

ಲಿಂಗಮ್ಮ— ಸುಮ್ಮನೇ ಇರದೆ ಏನು ಮಾಡ್ಯಾನು ? ಅತ್ತಿಯವರ ಮಾತಿಗೆ ಪ್ರತ್ಯುತ್ತರವನ್ನೇ ಕೊಡಲಿಲ್ಲಾ ! ಆ ನಮ್ಮ ಮಾವನು ಮಾತ್ರ ?....

ನಾಗಮ್ಮ— ಯಾರು ?

ಲಿಂಗಮ್ಮ— ಮಾವ – ಮುದಿಮಾವ. ಆತನು ಮಾತ್ರ ಅವಳ ಪಕ್ಷದವನಾಗಿ ಮಾತಾಡಲು, ಅತ್ತಿಯವರು ಸಿಟ್ಟಗೆದ್ದಾಕ್ಷಣವೇ ಸುಮ್ಮನಾದನು. ಕಾಲುಮುರಿದ ಕೋಳಿಯಂತೆ ಮನೆಯಲ್ಲಿಯೇ ಬಿದ್ದಿರುವನು. ಆ ಮುದುಕನು ಮಾತ್ರ ಊಟಕ್ಕೆ ಬಂದರೆ ನಾನು ಮಾತ್ರ ಅವನ ಸಮೀಪಕ್ಕೆ ಹೋಗುವದಿಲ್ಲ ನೋಡು !

ನಾಗಮ್ಮ— ಹೌದು ! ಆ ನನ್ನ ಮುದಿಮಂಗನು ಆ ಮಲ್ಲಮ್ಮನಿಂದಲೇ ತನ್ನ ಐಶ್ವರ್ಯ ಹೆಚ್ಚಿತೆಂದು ಬಂದ ಬಂದವರಮುಂದೆ ನಾಯಿ ಬೊಗಳಿದಂತೆ ಬೊಗಳುತ್ತಾನೆ! ಅವನು ಊಟಕ್ಕೆ ಬಂದರೆ ನಾನಂತೂ ಗಂಗಾಳಕ್ಕೆ ಕೂಳನ್ನೇ ಹಾಕುವದಿಲ್ಲ ನೋಡು. ತಂಗೀ, ಹೋಗಲಿ ಬಿಡು ಈಗ ಒಳ್ಳೇ ವ್ಯಾಳ್ಯವಾಗಿರುವದರಿಂದ ಸ್ವಲ್ಪ ಹೊತ್ತು ಪಗಡಿಯನ್ನಾಡುವ. ಆಗೋ ಅಲ್ಲಿ ಆಸಂಗಿ ಕವಡಿಯಿರುವದು ತೆಗೆದುಕೊಂಡು ಬಾ. ( ಲಿಂಗಮ್ಮ ತರುವಳು )

( ನಂಬರ ೩೦ ) ಪದ ರಾಗ – ಹೂರ ತಾಲ – ತ್ರಿತಾಲ

ಆನಂದ ಸಮಯವಿದು ಹಾ | ಸುಗುಣಲೆತ್ತ ವಗೆಯುವೆ
ನಾ ಮುನ್ನ | ಪಗಡಿಯ ಹೊಡೆದೆನು |
ತಗಿತಗಿ ಹಿಂದಕೆ | ನಗುತ ನೋಡು ನೀನೀಗ ||೧||

ಜಂಗಮ— ಆಹಾ ! ಈ ನೀಚ ಸ್ತ್ರೀಯರು ಶಿವಶರಣೆಯಾದ ಮಲ್ಲಮ್ಮನನ್ನು ಕಾಡಡವಿಗೆ ಕಳುಹಿಸಿ, ಆನಂದದಿಂದ ಪಗಡಿಯನ್ನು ಆಡುತ್ತಿರುವರಲ್ಲ? ಆಗಲಿ. ಸಮೀಪಕ್ಕೆ ಗೋಗಿ ಭಿಕ್ಷೆಯನ್ನು ಬೇಡುವೆನು. ಶಿವಶಿವಾ ಭಿಕ್ಷಾಂದೇಹಿ. ಭವತಿ ಭಿಕ್ಷಾಂದೇಹಿ.

ಲಿಂಗಮ್ಮ— ಅಕ್ಕಾ, ನಿನ್ನ ಲೆತ್ತವು ಏನು ಬಿದ್ದಿರುವದು ನೋಡು.

ಜಂಗಮ— ||ಪದ್ಯ|| ನೋಡಲೊಲ್ಲರು ಯನ್ನನಿವರು | ತಲೆಯತ್ತಿ ಮಾತನಾಡಿಸಲೊಲ್ಲರೊಂದಾಡೊಡಂ | ಈತನಾರೆಂದು ಪರಕಿಸುವ ಬುದ್ಧಿಯಂ ಕಾಣಲಿಲ್ಲಾ | ನೋಡಿ ವಂದಿಸಿನುತಿಸಿಕಾರುಣ್ಯಮಂ ಬೇಡುವದದಿರಲಿ | ಕಂಣು ಕಿವಿನಾಲಿಗೆಗಳಿರ್ದಾ ಶಿವದರ್ಶನಾದಿಗಳೊಳುಪಯೋಗಿಸರು ಹೇಮರಡ್ಡಿಯ ಸೊಸಿಯರು ||

ನನ್ನ ಭವತಿ ಭಿಕ್ಷಾಂದೇಹಿ ಅನ್ನುನ ಧ್ವನಿಯು ಈ ಸಂಪತ್ತುಶಾಲಿಗಳ ಕರ್ಣದಲ್ಲಿ ಬೀಳಲೊಲ್ಲದು. ಇನ್ನೊಂದುಸಾರೆ ನೋಡುವೆನು. ಶಿವ ಶಿವ ಭಿಕ್ಷಾಂದೇಹಿ ಭವತಿ ಭಿಕ್ಷಾಂದೇಹಿ.

ನಾಗಮ್ಮ— ತಂಗಿ, ಇಗೋ ದಹವನ್ನು ಹಾಕಿ ನಿನ್ನ ಕಾಯನ್ನು ಆಸಂಗಿಯಿಂದ ಕಡೆಗೆ ತಗಿದುಬಿಟ್ಟಿರುವೆನು ನೋಡು.

ಜಂಗಮ— ಇವರು ತಮ್ಮ ಆಸಂಗಿ ವ್ಯಾಸಂಗದಲ್ಲಿಯೇ ಇರುವರು ಮದಾಂಧರೇ !

ಪದ್ಯ. ಹಣವೆಂಬ ಪರೆಬಂದು ಕಣ್ಗಾಣದಿವರಿಗೆ | ಘನದರಿದ್ರತೆಯೆಂಬ ಅಮೃತಾಂಜನವ ಹಚ್ಚಿ ಋಣವೆಂಬ ಪಥ್ಯಮಂ ಪಿಡಿಸಿದರೆ | ಕಣ್ದೆರೆಯುಬಹುದೋ || ಧನವಿರ್ದೊಡೇಂ । ಇಲ್ಲದಿರ್ದೊಡೇಂ | ಹಣವುಳ್ಳ ಮನುಜನಿಗೆ ಸುಗುಣವಿರೆ ಹಾಲಿನೊಳು ಸಕ್ಕರಿಯು ಬೆರೆದಂತೆ ಸೊಗಸಪ್ಪದು ||೧||

ಇವರಿಗೆ ಬಂದಿರುವ ಕಣ್ಮುಚ್ಚು ರೋಗಕ್ಕೆ ದಾರಿದ್ರ್ಯವೆಂಬ ಅಮೃತಾಂಜನವ ಹಚ್ಚಿ ಋಣವೆಂಬ ಪಥ್ಯವನ್ನು ಇಟ್ಟರೆ ರೋಗವು ಪರಿಹಾರವಾಗಬಹುದು . ಇನ್ನೊಂದು ಸಾರೆ ಪರೀಕ್ಷೆಯನ್ನು ಮಾಡಿ ಆನಂತರ ಯೋಚಿಸುವೆನು. ಶಿವ ಶಿವ ಭವತಿ ಭಿಕ್ಷಾಂದೇಹಿ.

ನಾಗಮ್ಮ— ತಂಗೀ, ಯಾವನೋ ಗಾರ್ಧಪ ಕೂಗಿದಂತೆ ಕೂಗುತ್ತಿರುವನು. ನೋಡು ಯಾರು ?

ಜಂಗಮ— ಅಹಾ! ಪ್ರಥಮದಲ್ಲಿಯೇ ಗಾರ್ಧಪನಾದನಲ್ಲಾ. ಯಾಚಕವೃತ್ತಿಯಲ್ಲಿ ಭೇದ ಪಡಬಾರದು. ಆಗಲಿ ನೋಡುವೆನು.

ಲಿಂಗಮ್ಮ— ಅಕ್ಕಾ, ಇವನು ಯಾವನೋ ಒಬ್ಬ ಸನ್ಯಾಸಿಯು.

ಜಂಗಮ— ಶಿವ ಶಿವ ಭಿಕ್ಷಾಂದೇಹಿ.

ಲಿಂಗಮ್ಮ— ಎಲೋ ಸನ್ಯಾಸಿ, ನಾವು ಎದ್ದು ಬಂದು ನೀಡುವ ಹಾಗೆ ಇಲ್ಲಾ. ಹೋಗು.

( ನಂಬರ ೩೧ ) ಪದ ರಾಗ – ಭೂಪ ತಾಲ – ಬಿಲಂಜಿ

ಜಂಗಮ— ಹಸಿದು ಬಂದಿರುವೆನಮ್ಮಾ | ತಾಯಿಗಳೇ ||ಪಲ್ಲ||

ಪೊಡವಿಯೊಳಿನ್ನಂಥ | ಬಡ ಜಂಗಮರಿಗೆ |
ಹಿಡಿಅನ್ನ ನೀಡಲು, ಸಡಗರ ಬರ್ಪುದು ||೧||
ಆಂದದಿಂದಲಿ ಯದ್ದು ಬಂದು ಈ ಜಂಗಮಗೆ |
ಒಂದು ತುತ್ತನ್ನವ | ತಂದು ನೀಡಿರಿ ತಾಯಿ ||೨||

ತಾಯಿ, ಈ ಹೇಮರಡ್ಡಿ ಮನೆತನದವರು ಅತಿಥಿಗಳಿಗೆ ಪುಷ್ಕಳವಾಗಿ ಅನ್ನದಾನವನ್ನು ಮಾಡುವರೆಂಬ ದೊಡ್ಡ ಸುದ್ದಿಯನ್ನು ಕೆಳಿರುವೆನು. ತಾಯಿ ಅನ್ನದಾನವು; ಅಶ್ವದಾನ, ಗೋದಾನ, ಗಜದಾನ, ಸುವರ್ಣದಾನ, ರಜತದಾನ, ಭೂದಾನ, ಕನ್ಯಾದಾನಗಳಿಗಿಂತಲೂ ಅಧಿಕವಾಗಿರುವದರಿಂದ ಅನ್ನದಾನಕ್ಕೆ ಸಮಾನವಾದ ದಾನವೇ ಇಲ್ಲವೆಂದು ಶಾಸ್ತ್ರಸಿದ್ಧಾಂತವದೆ. ತಾಯಿ ಅನ್ನದಾನದ ಮಹಿಮೆಯನ್ನು ಹೇಳುವೆನು ಕೇಳು.

ಶ್ಲೋಕ— ತುರಗಶತ ಸಹಸ್ರಂ | ಗೊಗಜಾನಾಂಚಲಕ್ಷ್ಯಂ | ಕನಕರಜತ ಪಾತ್ರಂ ಮೇದಿನೀಂ ಸಾಗರಾಂತಾಂ || ವಿಮಲ ಕುಲವಧೂನಾಂ ಕೋಟಿಕನ್ಯಾಶ್ಚದ ದ್ಯನ್ನಹಿನಹಿಸಮುಮೆತ್ಯೈ ರನ್ನ ದಾನಂ ಪದಾನಂ ||೧|| ಅನ್ನದಾನ ಸಮುಂದಾನಂ ನಾಸ್ತಿ ನಾಸ್ತಿ ಜಗತ್ರಯೇ | ತಸ್ಮಾತ್ಸರ್ವ ಪ್ರಯತ್ನೇನ ಅನ್ನದಾನ ಪರೋಭವೇತ್ ||೨||

ಹೀಗಿರುವದು. ಮನೆತುಂಬಾ ನೀವೇ ಇರುವಿರಿ. ಯಾರಾದರೂ ಎದ್ದುಬಂದು ತುತ್ತು ಪ್ರಸಾದವನ್ನು ನೀಡಿರಿ. ಪುಣ್ಯ ಬರುವದು.

ನಾಗಮ್ಮ— ಎಲೋ, ದುಡಿದುಕೊಂಡು ತಿನ್ನಲಾರದೆ ಮನೆಮನೆಗೆ ಹೀಗೇಕೆ ತಿರುಗಾಡುತ್ತಿರುವಿ ? ನಿನ್ನನ್ನು ಸೀಳಿದರೆ ಇಬ್ಬರಾಗುವಂತಿರುವಿ ಹೋಗು !

ಜಂಗಮ-- ಅವ್ವಾ ನನ್ನನ್ನು ಸೀಳಿದರೆ ಇಬ್ಬರಲ್ಲದೆ ಒಂದು ಸಹಸ್ರ ವಾದರೂ ಆಗಬಹುದು. ನಿಮ್ಮಂಥ ಭಕ್ತರು ನನ್ನನು ಸೀಳೇ ಸೀಳು ತ್ತಾರೆ. ಆ ನನ್ನ ಸೀಳುಗಳಿಂದ ಉತ್ಪನ್ನವಾದ ಜಂಗಮರು ದುಡಿದು ಕೊಂಡು ತಿನ್ನುತ್ತಾರೆ ನಾನು ಮಾತ್ರ ಯಾವಕಾಲದಲ್ಲಿಯೂ ತಿರಿದು ಕೊಂಡು ತಿನ್ನುತ್ತೇನೆ.

ಲಿಂಗಮ್ಮ— ಎಲೋ ಅಯ್ಯಾ, ನೀನೇನು ಕುರುಡನೇ - ಕುಂಟನೇ ? ನೋಡುವದಕ್ಕೆ ಹೆಮ್ಮರನಾಗಿರುವಿ ! ಹೋಗು ಹೋಗು ಮುಂದಕ್ಕೆ ಹೋಗು.

ಜಂಗಮ— ಅಕ್ಕಾ, ಕಣ್ಣುಗಳು ಪ್ರತ್ಯಕ್ಷವಾಗಿಯೇ ಕಾಣುತ್ತಿರುವವು. ಕುರುಡನೆಂದು ಹೇಳುವಿಯಲ್ಲಾ. ತಾಯಿ ತುತ್ತು ಪ್ರಸಾವದನ್ನು ಈ ಜೋಳಿಗೆಯಲ್ಲಿ ಹಾಕು ಹೋಗುವೆನು.

ನಾಗಮ್ಮ— ಎಲೋ ನೀನು ನೋಟವನ್ನಾದರೂ ಹೇಳುವದಿಲ್ಲ, ಮಾಟ ಮದ್ದುಗಳನ್ನಾದರೂ ಮಾಡುವದಿಲ್ಲ. ನೀನೇನು ಆ ನಮ್ಮ ಮರಗವ್ವನ ಪೂಜಾರಿಯೇ ? ಅಂಥವರಿಗೆ ನೀಡಿದರೆ ಪುಣ್ಯಾ ಬಂದೀತು.

ಜಂಗಮ— ||ಪದ್ಯ|| ನೋಟ ಹೇಳುವನಲ್ಲಾ | ಮಾಟ ಮಾಡುವವ
ನಲ್ಲಾ | ಕಾಟಹಾಕುವದನಾಂ ನೀಟಾಗಿ ಬಲ್ಲೆ || ಗೊಗ್ಗಯ್ಯ
ನಂತೆ ನಾಬೊಗ್ಗಿ ಉಣಲಾರೆನಾ | ಬೊಗ್ಗಿಸುವೆ ನಿಮ್ಮಂಥ
ಭಕ್ತರಂ ನಾ | ಜೋಗಿಯಲ್ಲವು ನಾನು | ಗಂಡು ಜೋಗಿಯಂತಿರ್ಪ
ನಿಮ್ಮ | ಭೋಗ ಭಾಗ್ಯವನ್ನೆಲ್ಲ ನುಂಗಿ ನೀರ್ಕುಡಿವೆ | ಕುಡಿವೇ |
ಬಂದ ಯಾಚಕರನ್ನು ನಿಂದಿಸುವ ಕಾರ್ಯವಿದು || ಛಂದವಲ್ಲವು
ನೋಡಿರಿಂದು ಮನದಿ || ೧ ||

ತಾಯಿ, ಮಾಟ ಮದ್ದು ಮಂತ್ರಗಳನ್ನು ಮಾಡತಕ್ಕವರಿಗೆ ನೀಡಿದರೆ ಪುಣ್ಯ ಬರುವದೆಂದು ಹೇಳುವ ಮಾತು ಯೋಗ್ಯವಾಗಿರುವದು. ಹಸಿದುಕೊಂಡು ಬಂದ ಒಬ್ಬ ಜಂಗಮನಿಗೆ ತುತ್ತು ಪ್ರಸಾದವನ್ನು ನೀಡಿದರೆ ಕೋಟಿ ಯಜ್ಞವನ್ನು ಮಾಡಿದ ಫಲವು ಪ್ರಾಪ್ತವಾಗುವ

ದೆಂದು ಪೂರ್ವಿಕರು ಹೇಳುವರು. ತಾಯಿ, ತುತ್ತು ಪ್ರಸಾದವನ್ನು ನೀಡು.

ನಾಗಮ್ಮ— ಎಲೋ, ಗಂಡಸರಿಲ್ಲದ ವೇಳೆಯಲ್ಲಿ ಬಂದು ಕುಚೇಷ್ಟೆಯನ್ನು ಮಾಡುವಿಯಾ ? ನೀಡುವದಿಲ್ಲವೆಂದರೆ ಬಲತ್ಕಾರವೇಕೋ? ಈ ಗಳಿಕೆಯನ್ನು ನಿಮ್ಮಪ್ಪನೇನಾದರೂ ಕೊಟ್ಟಿದ್ದನೋ ?

ಜಂಗಮ— ಅವ್ವಾ, ನಮ್ಮಪ್ಪನು ನನಗಿಂತಲೂ ಬಡವನು. ದನವಿನ ಹಟ್ಟಿಯ ಗುಡಸಲಿನಲ್ಲಿ ಮಲ್ಲವ್ವ ಎಂಬ ಒಬ್ಬ ಬಡಭಕ್ತಳು ಇರುವಳು. ಆ ಮಲ್ಲವ್ವನಿಗೆ ಅವರ ಅತ್ತಿಯು ವಾರಕ್ಕೊಂದಾವರ್ತಿ ತಂಗಳ ಅಂಬಲಿಯನ್ನು ಕೊಡುತ್ತಿರುವಳಂತೆ. ನಾನು ಹೋಗಿ ಅವ್ವಾ ಹೊಟ್ಟೆಯು ಹಸಿದಿರುವದು ಎಂದು ಕೇಳಿದಾಕ್ಷಣವೇ ಆ ತಂಗಳ ಅಂಬಲಿಯನ್ನು ಕೊಡುತ್ತಿರುವಳು.

ಲಿಂಗಮ್ಮ— ಎಲೋ ಅಯ್ಯಾ! ಆ ಮಲ್ಲಿಯನ್ನು ನಮ್ಮ ಮುಂದೆ ಮಾತ್ರ ಕೊಂಡಾಡಬೇಡ. ನಿಮ್ಮಂಥ ಭೊಂಡ ಜಂಗಮರಿಗೆ ಬೇಕಾದವಳುಅವಳೇ ಸರಿ! ಅವಳಿಗೆ ನಿಮ್ಮಂಥ ಅಯ್ಗಳ ದೈವ್ವ ಬಡೆದಿರುವದು.

ಜಂಗಮ— ಆ ಮಲ್ಲಮ್ಮನಿಗೆ ನಮ್ಮಂಥ ಅಯ್ಗಳ ದೆವ್ವಬಡೆದಿರುವದು. ನಿಮಗೆ ದುಡ್ಡಿನ ದೆವ್ವ ಬಡೆದಿರುವದು ದುಡ್ಡಿನ ದೆವ್ವಾ!

( ಪದ್ಮಮ್ಮನ ಪ್ರವೇಶ )

ಪದ್ಮಮ್ಮ— ಸೊಸಿಯರೇ, ಏನಿದು ಗಲಭೆ? ಇವನು ಯಾರು ?

ನಾಗಮ್ಮ— ಅತ್ತಿಯವರೇ, ಇವನು ಯಾವನೋ ಒಬ್ಬ ಜಂಗಮನು. ಭಿಕ್ಷೆಗಾಗಿ ಬಂದು ನಮ್ಮನ್ನು ಪರಿಹಾಸ್ಯಮಾಡುತ್ತಿರುವನು.

ಪದ್ಮಮ್ಮ— ಎಲೋ ಜಂಗಮಾ, ಏನಿದು ನಿನ್ನ ಹುಡುಗಾಟಿಕೆಯು ?

ಜಂಗಮ— ಅಮ್ಮಾ, ನಾನು ಏನೂ ಹುಡುಗಾಟಿಕೆಯನ್ನು ಮಾಡಿದವನಲ್ಲ. ಹೊಟ್ಟೆಯ ಹಸುವಿಗಾಗಿ ತುತ್ತು ಪ್ರಸಾದವನ್ನು ಕೇಳಿದರೆ ಈ ನಿನ್ನ ಸೊಸೆಯರು ನನ್ನ ಕತ್ತನ್ನು ಹಿಡಿದು ನೂಕುತ್ತಿರುವರು.

ಪದ್ಮಮ್ಮ— ಎಲೋ, ನನ್ನ ಸೊಸೆಯರು ನನ್ನ ಭಯದಿಂದ ನಿನ್ನ

ಕತ್ತನ್ನು ಹಿಡಿದು ನೂಕುತ್ತಿರುವರು. ನಾನೇ ಇದ್ದರೆ ಮಾತ್ರ ನಿನ್ನ ಕುತ್ತಿಗೆಯನ್ನೇ ಹಿಚುಕುತ್ತಿದ್ದೆ!

ಜಂಗಮ— ಆಹಾ! ಯಜಮಾನಿಯಲ್ಲಿ ಎಂಥಾ ಸದ್ಗುಣವು ವ್ಯಾಪಿಸಿ ಗೊಂಡಿರುವದು. ಅಮ್ಮಾ, ಹಾಗೆ ಮಾಡಿದರೂ ಮಾಡು. ತುತ್ತು ಪ್ರಸಾದವನ್ನು ಕೊಡಿಸು. ಹೊರಟು ಹೋಗುವೆನು.

ಪದ್ಮವ್ವ— ಎಲೋ ಒಣ ಒಣ ಅನ್ನುತ್ತಾ ಇನ್ನೂ ನಿಂತಿರುವಿಯಾ? ಇಷ್ಟಕ್ಕೆ ಸುಮ್ಮನೇ ಹೋಗುವಿಯೋ ಇಲ್ಲವೋ?

ಜಂಗಮ— ಅಮ್ಮಾ, ಹತ್ತೆಂಟುಮಂದಿ ಮಕ್ಕಳನ್ನು ಹಡೆದ ಮಕ್ಕಳ ತಾಯಿಯಾಗಿರುವಿ. ನಿನ್ನ ಮಕ್ಕಳಲ್ಲಿ ನಾನೊಬ್ಬ ಮಗನೆಂದು ತಿಳಿ. ತುತ್ತು ಪ್ರಸಾದವನ್ನು ಜೋಳಿಗೆಯಲ್ಲಿ ಹಾಕಿಸು. ತಾಯಿ, ಜಂಗಮನು ತೃಪ್ತನಾದರೆ ಸಾಕ್ಷಾತ್ ಶಂಕರನು ತೃಪ್ತನಾಗುವನು. ಅವನ ತೃಪ್ತಿಯಿಂದ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ತೃಪ್ತ ವಾಗುವದೆಂದು ನಿಗಮಾಗಮಗಳು ಸಾರುತ್ತವೆ. ಕೇಳು.

"ಜಂಗಮೇ ಭುವಿಸಂತೃಪ್ತೆ ತೃಪ್ತೋ ಭವತಿ ಶಂಕರಃ।
ತತ್ತೃಪ್ತ್ಯಾ ತನ್ಮಯಂ ವಿಶ್ವಂತೃಪ್ತ ಮೇತಿ ಚರಾಚರಂ"

ಆದ್ದರಿಂದ ತುತ್ತು ಪ್ರಸಾದವನ್ನು ನೀಡಿಸು. ಹೊರಟು ಹೋಗುವೆನು.

ಪದ್ಮವ್ವ— ಸೊಸಿಯರೇ, ಒಲೆಯಲ್ಲಿರುವ ಬೆಂಕಿಯನ್ನು ತಂದು ಇವನ ಜೋಳಿಗೆಯಲ್ಲಿ ಹಾಕಿರಿ! ಹಾಗಾದರೆ ಹೋಗುವನು.

ನಾಗಮ್ಮ— ಎಲೋ ತೆಗೆದುಕೋ!

( ನಂಬರ ೩೨ ) ಪದ ರಾಗ– ಭೈರವಿ ತಾಲ - ದಾದರಾ

ಜಂಗಮ— ಬೆಂಕಿ ಭಿಕ್ಷಾವೇ | ತಾಯಿ || ಮಲ್ಲವ್ವನುಯೆಂಬ ಶರಣೇ |
ಇಲ್ಲಾದೇ ಈ ಮಂದಿರವು | ಸಲ್ಲಲೀತ ! ಭಿಕ್ಷೆಗೀಗ
ಸಲ್ಲದ್ಹೋಯಿತೇ || ೧ ||

ತಾಯೀ ಮಲ್ಲವ್ವಾ! ನೀನು ಮನೆಯನ್ನು ಬಿಟ್ಟು ಹೋಗಿ ನಮ್ಮಂಥ ಜಂಗಮರಿಗೆ ದಿಕ್ಕಿಲ್ಲದಂತೆ ಮಾಡಿದೆಯಾ? ಅಮ್ಮಾ, ಈ ಬೆಂಕಿಯು

ನಿಮಗೆ ಕೆಲವು ಕಾಲದಮೇಲಿ ಬೇಕಾಗುವದು. ನಿಮ್ಮಲ್ಲೇ ಇರಲಿ. ನಾನು ಹೋಗುವೆನು.

ಪುದ್ಮವ್ಮ— ಸೊಸಿಯರೇ, ನಾವು ಹೀಗೆ ಮಾಡಿದ್ದರಿಂದಲೇ ಈ ಜಂಗಮನು ಹೋದನು.

ನಾಗವ್ಮ— ಅತ್ತಿಯವರೇ, ಈ ಜಂಗಮನು ಮಲ್ಲಯ್ಯನಿಗೆ ಮಲ್ಲವ್ವನೇ ಗತಿಯಂದು ಅಂದದ್ದನ್ನು ಕೇಳಿದಿರೋ ?

ಪುದ್ಮವ್ಮ— ನಾಗವ್ಮಾ, ಅವಳು ವ್ಯಭಿಚಾರಿಣಿಯನ್ನುವದು ಈ ಜಂಗಮನ ಮಾತಿನಿಂದ ಸಿದ್ಧವಾಯಿತು. ಅವಳಿಗೂ ಇವನಿಗೂ ಸಂಬಂಧವಿರುವದರಿಂದಲೇ ಇಷ್ಟು ಹವ್ಯಾಸದ ಮಾತುಗಳನ್ನು ಆಡಿದನು. ನಿಂಗವ್ಮ, ನೀನು ಹೋಗಿ ಆ ಮಲ್ಲಿಯ ಗಂಡನಾದ ಹುಚ್ಚ ಭರಮರಡ್ಡಿಯನ್ನು ಕರೆದುಕೊಂಡು ಬಾ.

ಶಿಂಗವ್ಮ— ಆಗಲಿ. ಮಾವಾ ಎಲೋ ಹುಚ್ಚಾ ! ಬೇಗ ಬಾ. ಅತ್ತಿಯವರು ಕರೆಯುವರು.

( ಭರಮರಡ್ಡಿಯ ಪ್ರವೇಶ )

ಭರಮರಡ್ಡಿ— ಅವ್ವಾ ! ಅವ್ವಾ !

ಪುದ್ಮವ್ಮ— ಭರಮರಡ್ಡಿ, ನಿನ್ನ ಹೆಂಡತಿಯ ಪ್ರತಾಪವು ನಿನಗೆ ಗೊತ್ತಿದ್ದಂತೆ ಕಾಣಲಿಲ್ಲ. ನಮ್ಮ ಮನೆತನದ ಮಾನವು ಸ್ವಲ್ಪಾದರೂ ಉಳಿಯಲಿಲ್ಲ. ಮಲ್ಲಯ್ಯನೆಂಬ ವಿಟಜಂಗಮನನ್ನು ಕೂಡಿಕೊಂಡು ಹುಲ್ಲು ಗುಡಿಸಲಿನಲ್ಲಿ ಹಗಲೂ ಇರುಳೂ ಸರಸಸಲ್ಲಾಪಗಳನ್ನು ಆಡುತ್ತಿರುವಳೆಂದು ಊರೊಳಗೆಲ್ಲ ಸುದ್ದಿ ಹಬ್ಬಿರುವದು ! ನಾನಂತೂ ಹೊರಗೆ ಹೋಗುವಹಾಗಿಲ್ಲ. ಜನರಿಗೆ ಮುಖವನ್ನು ತೋರಿಸುವಂತಿಲ್ಲ.

ಭರಮರಡ್ಡಿ— ಹಂಗಾರೆ ಪಾಡಾತು ಬಿಡು. ಹೊರ‍್ಯಾಕೆ ಹೋಗೋದಿಲ್ಲಾ. ಏ ಗಾಳೀಪಟಾ ನೀನು ಇಲ್ಲೇ ಆಡು.

ಪುದ್ಮವ್ಮ— ಎಲೋ ಹುಚ್ಚಾ, ಇಗೋ ತೆಗೆದುಕೋ. ಈ ಕೊಡಲಿ

ಯನ್ನು ತೆಗೆದುಕೊಂಡು ಹೋಗಿ ಅವರೀರ್ವರನ್ನು ಕಡಿದು ಬಾ ಹೋಗು. ಈ ಕೆಲಸವು ನಿನ್ನಿಂದ ಆಗುವದೋ ಇಲ್ಲವೋ ಹೇಳು.

ಭರಮರಡ್ಡಿ— ಅವ್ವಾ ನಾನು ಕೈಲಾಗದವನೇ ?

ಪದ್ಯ :— ಅಡಗಿಸುವೆನು ಹೊಟ್ಟೆಯೊಳು ಮುದ್ದೆಗಳಾ |
ಮುರಿದು ನುಂಗುವೆನು ನೀನು ಮಾಡಿಟ್ಟ ರೊಟ್ಟಿಗಳಾ |
ಹೊಡೆದೋಡಿಸುವೆನು ನಮ್ಮ ಹೊಲದೊಳಗಿನ ಕಾಗಿ ಗುಬ್ಬಿಗಳಾ || ಝಾಡಿಸುವೆನು ನನ್ನ ಮೈಮೇಲೆ ಕೂತು ಕಡಿಯುವ ಚುಕ್ಕಾಡಿಗಳಾ || ೧ ||

ಅವ್ವಾ ! ನಾನು ಹುಚ್ಚನಾದರೆ ಈ ಕೊಡಲಿಗೇನಾದರೂ ಹುಚ್ಚು ಹಿಡಿದಿರುವದೇ ? ಹೋಗಿ ಆ ಮಲ್ಲಯ್ಯನನ್ನು ಕಡಿದು ನಮ್ಮ ಮಲ್ಲವ್ವನ್ನ ಮನಿಗೆ ಕರ್ಕೊಂಡು ಬರ್‍ತೀನಿ.

ಪದ್ಮಮ್ಮ— ಎಲೋ. ಅವರಿಬ್ಬರನ್ನೂ ಕೊಂದು ಬಾ !

ಭರಮರಡ್ಡಿ— ಮಲ್ಲವ್ವನ್ನೂ ಸಾಯಿಗೊಸ್ನಬೇಕೆ ?

ಪದ್ಮಮ್ಮ— ಹೂಂ. ಅವಳೇ ನಮ್ಮ ಮನೆಗೆ ಮೃತ್ಯುದೇವತೆಯು.

ಭರಮರಡ್ಡಿ— ಮತ್ತೆ ನನಗೆ ಹಣ್ತೆವ್ವಾ ?

ಪದ್ಮಮ್ಮ— ಇನ್ನೊಂದು ಲಗ್ನವನ್ನು ಮಾಡುತ್ತೇನೆ ಹೋಗು.

( ದಬ್ಬುವಳು. )

( ಈಶ್ವರ ಪ್ರವೇಶ )

( ನಂಬರ ೩೩ ) ಪದ ರಾಗ – ಕೇತಾರಗೌಳ ತಾಲ – ಕೇರವ

ಪರಿಹಾಸ್ಯಗೈದರೀಗಲೇ | ಸಾರೀಮಣಿಯರೆನ್ನ ||
ಮರುಳಾನೆ ನಿನ್ನ | ಕೊರೆದಾರೆ ದೇಹ |
ಎರಡಾಗುವಂತೆ | ಪರಿಣಮಿಸಿತಿರುವಿ ||
ಪರಿಪರಿಯೊಳು |ದೂರುತೆನ್ನನು || ೧ ||

ಆಹಾ ! ಕಲಿಯುಗದಲ್ಲಿ ಮಾನವರು ದ್ರವ್ಯದ ಮದದಿಂದ ಎಂಥಾ ಅನ್ಯಾಯವಾದ ಕಾರ್ಯಗಳನ್ನು ಮಾಡುತ್ತಿರುವರು. ಕಂತೇಭಿಕ್ಷೆ

ಗಾಗಿ ನಾನು ಮನೆಗೆ ಹೋದರೆ ಮುದ್ದೀಕೋಲಿನಿಂದ ಹಾಗೂ ಕಸಬರಿಗೆಯಿಂದ ಹೊಡೆದದ್ದಲ್ಲದೆ, ಬೆಂಕಿಯಿಂದ ಮೈಯನ್ನೆಲ್ಲಾ ಸುಟ್ಟರಲ್ಲಾ ! ಈ ನೀಚ ಸ್ತ್ರೀಯರೊಡನೆ ಕುಚೇಷ್ಟೆಯನ್ನು ಮಾಡುತ್ತ ಆ ನನ್ನ ಪರಮಭಕ್ತಳಾದ ಮಲ್ಲಮ್ಮನ ವಿಷಯವನ್ನೇ ಮರೆತಿರುವೆನು. ಗೋವುಗಳನ್ನು ಕಾಯ್ದು ಶಗಣಿಯನ್ನು ಹಿಡಿಯಲಾರದೆ ಎಷ್ಟು ಬೇಸತ್ತಿರುವಳೋ ! ಕಾರಣ ನಾನೇ ಹೋಗಿ ಈ ದಿವಸದ ಶಗಣಿಯನ್ನು ಕೂಡಿ ಹಾಕಿದರೆ ಭಕ್ತವತ್ಸಲನೆಂಬ ಹೆಸರು ಸಾರ್ಥಕವಾಗುವದು. ಕಾರಣ ಜಾಗ್ರತೆ ಗೋವಿನ ಹಟ್ಟಿಗೆ ಹೋಗುವೆನು. ( ಹೋಗುವ )

( ದನವಿನ ಹಟ್ಟಿ, ಮಲ್ಲಮ್ಮ ರಾಟಿಯಿಂದ ನೂಲುತ್ತಿರುವಳು)

( ನಂಬರು ೩೪ ) ಪದ ರಾಗ-ಕಾನಡಾ ತಾಲ-ಆದಿತಾಲ

ಮಲ್ಲಮ್ಮ— ಜಗದಾಚಾರ್ಯಭೋ ॥ ರೇಣುಕ ದೇವಾ ||
ಮೃಗಧರ ರೂಪನಿಭೋ ಪರಿಪಾಹಿ ||ಪಲ್ಲ||
ಭುವಿಶಿವಯೋಗೀ | ವೃಂದಕೆ ವಸ್ತ್ರವ |
ಧರಿಸಲು ನೂಲುವೆ | ರಾಟಿಯಿಂದಲಿ ನಾ ||೧||
ಪಾವನಕಾಯ | ಪಾವನಲೋಚನ |
ಕೋವಿದಸಂಚಯ ॥ ದೇವಮಹೇಶಾ ||೨||

ದೇವ ! ಕೇವಲ ಶಿವರೂಪರಾದ ಹರಗುರು ಚರಮೂರ್ತಿಸ್ವಾಮಿಗಳ ಕಂಥಾಕೌಪೀನಾದಿಗಳಿಗಾಗಿ ನಾನು ಕೈಕೊಂಡಿರುವ ನೂಲುವ ಕಾರ್ಯವನ್ನು ಪ್ರಕೃತದಲ್ಲಿ ಪೂರೈಸಿದಂತಾಯಿತು. ಇನ್ನು ಮುಂದೆ ಪರಮವೈದಿಕರಾದ ವೀರಶೈವಾದಿಮತದವರು ತಮ್ಮ ಲಿಂಗಾಂಗಗಳಿಗೆ ಧರಿಸುವ ಪವಿತ್ರವಾದ ಭಸ್ಮವು ಯಾವ ಗೋಮಯದಿಂದ ಹುಟ್ಟು ತ್ತದೆಯೋ ಅಂಥಾ ಪವಿತ್ರವಾದ ಗೋಮಯವನ್ನು ಹಿಡಿಯುವ ಕಾರ್ಯವನ್ನು ಕೈಕೊಳ್ಳುವೆನು.

( ನಂಬರು ೩೫ ) ಪದ ರಾಗ- ಆನಂದಭೈರವಿ ತಾಲ-ಆದಿತಾಳ

ವಿಮಲಮನೋಲೋಲಭೋ | ಯಮಿಕುಲತಿಲಕ ||
ಅಘನಾಶಭೋ ಶಂಭೋ | ಪಾಹಿಮೆಗೌರೀಪತೆ ||

ಚಂಡಮಾರಹಾಘೋರ | ಮಲ್ಲಿನಾಥ ನಾಥ ||೧||
ಜನಿತಾಚಮಾತಾಸದಾ | ಬಂಧುನಿವಹಧೂತೋಭುವಿ |
ಶಮನ್ಯೈಕಪ್ಯೈರೀಶ | ದೇಹಿಮೆಚಾಯುಸುಖಂ |
ಖಂಡಿತಾತ್ಮ ಭೂಮಾನ | ಧನ್ಯಮಾಯಾದೂರ ||೨||

ಇದೇನು? ಹಟ್ಟಿಯಲ್ಲಿ ಗೋವುಗಳು ಇದ್ದಂತೆ ಕಾಣುವದಿಲ್ಲ. ಚರ ಮೂರ್ತಿಗಳಾದ ಮಲ್ಲಯ್ಯಸ್ವಾಮಿಗಳಂತೂ ಇದುವರೆಗೂ ಊಟಕ್ಕೆ ಬಂದವರಾಗಲಿಲ್ಲ. ಪೂಜಾಕಾಲವು ಅತಿಕ್ರಮಿಸುತ್ತಿರುವದು. ಏನು ಮಾಡಲಿ? ಭವತು. ಗೋವುಗಳನ್ನು ಹುಡುಕಿಕೊಂಡು ಬಂದು ಮುಂದಿನ ಕಾರ್ಯವನ್ನು ಆಲೋಚಿಸುವೆನು.

( ಹೋಗುವಳು. )

( ಮಲ್ಲಿಕಾರ್ಜುನ ಪ್ರವೇಶ )

**ಜಂಗಮ**— ನಾನು ಈ ದಿವಸ ವೇಳೆಗೆ ಸರಿಯಾಗಿ ಊಟಕ್ಕೆ ಬಾರದೆ ಇದ್ದುದರಿಂದ ಪೂಜಾಕಾಲವು ಅತಿಕ್ರಮಿಸುವದೆಂದು ಮಲ್ಲಮ್ಮನು ಮುಂದಕ್ಕೆ ಹೆಜ್ಜೆಯನ್ನಿಡಲಾರದೆ ಸಂಕಟಪಡುತ್ತಾ ಹೋಗುತ್ತಿರುವಳು. ಗೋವುಗಳನ್ನು ಕಾಣದೆ ಇದ್ದುದಕ್ಕಾಗಿ ಹುಡುಕಿಕೊಂಡು ಬರುವದಕ್ಕಾಗಿ ಸಿದ್ಧಾಪುರದ ಮಾರ್ಗವನ್ನು ಹಿಡಿದಿರುವಳು. ಶಿವ ಶರಣೆಯು ಈ ಮಹತ್ವವಾದ ಗೋಮಯ ಕಾರ್ಯವನ್ನು ಪೂರೈಸದೆ ಹೊರಟಿರುವಳು. ಎಂಥಾ ಪವಿತ್ರ ಕಾರ್ಯವನ್ನು ಕೈಕೊಂಡಿರುವಳು!

|| ಪದ್ಯ || ನಂದಾಭದ್ರಾಚಸುರಭಿಃ | ಸುಶೀಲಾಸುಮನಾಸ್ತಥಾ ||
ಪಂಚಗಾವೋವಿಭೋಃಜಾತಾಃ | ಸದ್ಯೋಜಾತಾದಿ ವಕ್ತ್ರತಃ ||೧||

ನನ್ನ ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ್ಯ ಮುಖಗಳಿಂದ ಉದ್ಭವಿಸಿದ **ನಂದ, ಭದ್ರ, ಸುರಭಿ, ಸುಶೀಲ, ಸುಮನ**ಗಳೆಂಬ ಪಂಚಗೋವುಗಳಿಂದ ಉತ್ಪನ್ನವಾಗುವ ಗೋಮಯದಿಂದಲ್ಲವೇ ಭಸ್ಮವಾಗುವದು. ಇಂಥಾ ಪವಿತ್ರವಾದ ಕಾರ್ಯದಲ್ಲಿ ಉಳಿದಿರುವ ಶಗಣಿಯನ್ನು ನಾನೇ ಹಿಡಿಯುವೆನು.

( ನಂಬರು ೩೬ ) ಪದ ರಾಗ–ಪೂರ್ವಿ ಆದಿತಾಳ

ಪಿಡಿಯುವೆ | ಶಗಣಿಯಾ ||ಪಲ್ಲ||
ಮಡದಿ ಮಲ್ಲವ್ವನು | ಒಡನೆ ಬರುವಳು |
ಸಡಗರದಿಂದಲಿ | ಹೆಡಿಗೆಯ ತುಂಬಿದೆ ||೧||

ಈ ಕಾರ್ಯವನ್ನು ಪೂರೈಸಿದೆನು. ಆಹಾ ! ಹರಗುರುಚರಮೂರ್ತಿಗಳಿಗೆ ಬೇಕಾಗುವ ಅಂತು ಕೌಪೀನಾದಿ ವಸ್ತ್ರಗಳಿಗಾಗಿ ಕೈಕೊಂಡಿರುವ ನೂಲುವ ಕಾರ್ಯವನ್ನು ಹಾಗೆಯೇ ಬಿಟ್ಟು ಹೋಗಿರುವಳಲ್ಲಾ ! ಇದನ್ನು ಸಹ ನಾನೇ ಪೂರೈಸಿಬಿಡುವೆನು.

( ನಂಬರು ೩೭ ) ಪದ

ತಿರುಹುವೆ ರಾಟಿಯು | ಅರುವುಳ್ಳ ಮಲ್ಲವ್ವ |
ವಿರಶೈವಳು ನೀನಾ |ಪಾರಮಹಿಮಳು ತಾಯಿ || ೧ ||

ಇಷ್ಟು ಕೆಲಸಗಳನ್ನು ಪೂರೈಸಿದರೂ ಕೂಡ ಮಲ್ಲವ್ವನು ಬಂದವಳಾಗಲಿಲ್ಲ. ಸಿದ್ಧಾಪುರಕ್ಕೆ ಹೋದಕಾಲದಲ್ಲಿ ನೀಚ ಸ್ತ್ರೀಯರು ಮತ್ತಾವ ಕಷ್ಟಕ್ಕೆ ಗುರಿಮಾಡಿದರೋ ಏನೋ ! ಕಾರಣ ನಾನೇ ಹೋಗಿ ಗೋವುಗಳನ್ನು ಹುಡುಕಿಕೊಂಡು ಬರುವೆನು.

( ಹೋಗುವನು )

( ಭರಮರಡ್ಡಿಯ ಪ್ರವೇಶ )

ಭರಮರಡ್ಡಿ — ಇದೇನಪಾ ! ಇಲ್ಲಿಗೆ ಬಂದಾಕ್ಷಣವೇ ನನ್ನ ಹೊಟ್ಟಿಯೊಳಗೆ ಭುಗಿಲ್ ಭುಗಿಲ್ ಅಂತೈತಿ. ನಮ್ಮವ್ವ ನೋಡಿದರೆ ಮಲ್ಲಯ್ಯನ್ನು ಮಲ್ಲವ್ವನ್ನು ಕಡಮು ಬಾ ಅಂತ ನನ್ನ ಕೈಯ್ಯಾಗೆ ಕೊಡ್ಲಿ ಕೊಟ್ಟು ಕಳಿಸ್ಯಾಳೆ. ಅವರು ಬರೋತನ್ಕ ಈ ಗುಡಿಸಲ ಹಿಂದೆ ಕಾಯ್ತು ಕುಂತ್ಗಂತೇನಿ. ( ಗುಡಿಸಲ ಹಿಂದೆ ಕುಳಿತುಕೊಳ್ಳುವನು )

( ಮಲ್ಲಿಕಾರ್ಜುನ ಪ್ರವೇಶ )

( ನಂಬರ ೩೮ ) ಪದ ರಾಗ– ಶಾಮ ಕಲ್ಯಾಣಿ ಆದಿತಾಳ

ಕಾಯುವೆನಾ | ದನಾ | ಕಾಯುವೆನಾ ||
ನನ್ನೆತ್ತು | ನಮ್ಮೆಮ್ಮಿ | ನಮ್ಮಾಕಳಾ || ೧ ||

ನಾನೇ ಹೋಗಿ ಗೋವುಗಳನ್ನು ಹೊಡೆದುಕೊಂಡು ಬಂದೆನು. ಆದರೂ ಮಹಾದೇವಿಯಾದ ಮಲ್ಲವ್ವನು ಬಂದವಳಾಗಲಿಲ್ಲ. ಕಾರಣ ವೇನಿರಬಹುದು ? ಒಹೋ ! ಹೇಮರಡ್ಡಿಯು ಮನೆಗೆ ನಾನು ಭಿಕ್ಷೆ ಗಾಗಿ ಹೋದಾಗ ಬೆಂಕಿಯನ್ನು ನೀಡಿದ್ದಕ್ಕಾಗಿ ಮಲ್ಲಯ್ಯನಿಗೆ ಮಲ್ಲ ವ್ವನೇಗತಿಯೆಂದು ನಾನು ಆಡಿದಮಾತನ್ನು ಕೇಳಿ ಆ ನೀಚ ಸ್ತ್ರೀಯರು ನಮ್ಮೀರ್ವರಲ್ಲಿ ವ್ಯಭಿಚಾರವನ್ನು ಕಲ್ಪಿಸಿ ಭರಮರಡ್ಡಿಯ ಕೈಯಲ್ಲಿ ಕೊಡಲಿಯನ್ನು ಕೊಟ್ಟು ನಮ್ಮನ್ನು ಕಡಿದು ಹಾಕಿ ಬಾ ಎಂದು ಕಳುಹಿಸಿರುವರಲ್ಲಾ ! ಭವತು. ಮುಂದಿನ ಪರಿಣಾಮಕ್ಕಾಗಿ ಗೋವು ಗಳನ್ನು ಕಾಯುತ್ತಾ ಇಲ್ಲೇ ಇರುವೆನು.

**ಭರಮರಡ್ಡಿ—** ಇವನೇ ಮಲ್ಲಯ್ಯ ಅಂಬೊ ಕಳ್ಳ ಜಂಗಮ. ಇಲ್ಲಿ ಅಂದ್ರೆ ನಮ್ಮ ದನ ಕಾಯಾಕೆ ಕಾರಣೇನು ಅಂದೆ. ಇನ್ನು ತಡ ಯಾಕೆ ಈ ಕೊಡ್ಲಿಯಿಂದ ಕಡಿದು ಬಡ್ತೇನಿ !

॥ಪದ॥

ಅಯ್ಯಾ | ಬಾರ್ಲೆ | ಒಡೆಯುವೆ ತಲೆಯನು |
ಕಡಿಯುವೆ | ಕೊಡಲಿಯ ॥ ೧ ॥

( ಕೊಡ್ಲಿ ಕೈಯಿಂದ ಜಾರಿ ಬೀಳುವದು )

ಎಲೇ ಅಯ್ಯಾ ! ನನಿಗೆ ಸಿಟ್ಟುಬಂದಾಗ ನನ್ನ ಜುಟ್ಟಾ ಹಿಡಿದ್ಯಾ ! ಕೊಡ್ಲೀನು ಕೆಡವಿ ಹೋದ್ಯಾ ! ಇನ್ನೊಂದಪ ಬಾರ್ಲೆ ಗೊಯ್ಕ ಮಾಡಿಬಿಡ್ತೇನಿ. ( ಮರೆಯಾಗುವ )

( ಮಲ್ಲಮ್ಮನ ಪ್ರವೇಶ )

( ನಂಬರ ೪೯ ) ಪದ ರಾಗ – ಸಾರಂಗ ತಾಲ – ಕೇರವೆ

ಮರತಿಯ ಯನ್ನ ಶ್ರೀಗಿರಿವರತಾತ | ಗಿರಿವರತಾತ |
ಗಿರಿಜೆಯನಾಥ ॥ ಪಲ್ಲ ॥ ಕಣ್ಮರೆಯಾಗಿ | ಕಾಣದಾದೆ |
ಬಹು ಸುಖವಿಹುದೇ | ಕಾನನದೊಳು ॥ ೧ ॥

ಇದೇನಾಶ್ಚರ್ಯವು ? ಈ ದಿನದ ಶಗಣಿಯೇ ಕಾಣುವದಿಲ್ಲ. ಭೋ ಮಲ್ಲಿಕಾರ್ಜುನಾ ! ದಿಕ್ಕಿಲ್ಲದವಳೆಂದು ಈ ನನ್ನ ಕೆಲಸವನ್ನು ನೀನೇ ಮಾಡಿದೆಯಾ ? ಅಥವಾ ಯಾರಿಂದಲಾದರೂ ಮಾಡಿಸಿದೆಯಾ ?

ಭರಮರಡ್ಡಿ— ಅವನೇ ಆ ಮಲ್ಲಯ್ಯನ್ನೇ ಮಾಡಿದಾ !

ಮಲ್ಲಮ್ಮ— ಬೇರೆಯುವರಿಂದ ಮಾಡಿಸಲಿಕ್ಕೆ ನಿನ್ನಲ್ಲಿ ಸೇವಕರು ಯಾರಿರುವರು? ನಿನ್ನ ಸೇವೆಯನ್ನು ಮಾಡತಕ್ಕವಳು ನಾನೊಬ್ಬಳೇ ಅಲ್ಲವೇ!

ಭರಮರಡ್ಡಿ— ಹೂ, ಅವನಿಗೆ ನೀನೊಬ್ಬಳೋ; ನಿನಿಗೆ ಅವನೊಬ್ಬನೇ ! ಹತ್ತರಕ್ಕೆ ಬಾ· ಕೊಯ್ಕ ಮಾಡ್ತೇನಿ.

ಮಲ್ಲಮ್ಮ— ಸ್ವಾಮಿ, ಇನ್ನೂ ನಿಮಗೆ ಹೊಟ್ಟೆಯು ಹಸಿದಿಲ್ಲವೇ ? ಈ ಬಡವಿಯ ಮನೆಯ ತಂಗಳ ಅಂಬಲಿಯನ್ನು ಉಣ್ಣಲಾರದೆ ಬೇಸತ್ತಿರುವೆಯಾ ? ಈ ಭಕ್ತಳನ್ನು ಗೋಳಾಡಿಸಬೇಡ ! ಜಾಗ್ರತೆಯಾಗಿ ದರ್ಶನ ಕೊಡು !

( ಮಲ್ಲಯ್ಯನ ಪ್ರವೇಶ )

ಶಿವಶಿವಾ ! ಈ ಜಗತ್ತಿನಲ್ಲಿ ನಾನು ತುತ್ತು ಪ್ರಸಾದಕ್ಕಾಗಿ ಯಾಚನೆಯನ್ನು ಮಾಡುತ್ತಾ ಎಷ್ಟ ತಿರುಗಿದರೂ ನನ್ನ ಹೊಟ್ಟೆಗೆ ತುತ್ತು ಪ್ರಸಾದವನ್ನು ಕೊಡತಕ್ಕಂಥ ಮಹಾತ್ಮರನ್ನು ಕಾಣಲಿಲ್ಲ. ಧನ್ಯ ! ಕಲಿಪುರುಷನೇ ನೀನೇ ಧನ್ಯ !

ಮಲ್ಲಮ್ಮ— ಆಹಾ ! ನನ್ನ ಸ್ವಾಮಿಯು ಬಂದೇ ಬಿಟ್ಟನು.

( ನಂಬರ ೪೦ ) ಪದ ರಾಗ– ದರ್ಬಾರ ಕಾನಡಾ ತಾಲ– ತ್ರಿತಾಲ

ಸದಯನೆ ಮುಖವಿದು ಬಳಲಿ ಇರುವದಹ |
ಒದಗಿಹುದೋ ರೋಗಾ ವಿದೇಂಪರಿ ||ಪಲ್ಲ||
ನವನವಬಿಲದೊಳ್ ದಿವ್ಯ ಮೃಗಂಗಳ |
ಮಧ್ಯದಿ ಕಂಡಿಯಾ ಹುಲಿಯು ಕರಡಿಗಳ |
ದಿವ್ಯಮೂರ್ತಿ ನಿನ್ನ ನೋಡದೆ ಇರುವೆನೆ ||೧||

ಸ್ವಾಮಿ, ಏಕೆ? ಈ ದಿವಸ ಬಹಳವಾಗಿ ಹಸಿದಿರುವೆಯಾ? ಅಡವಿಯಲ್ಲಿ ಹುಲಿ - ಕರಡಿಗಳೇನಾದರೂ ಬೆದರಿಸಿದವೇ ? ಯಾವದಾವರೊಂದು ರೋಗವು ತೊಡಕಿರುವುದೇ ? ನಿನ್ನ ಮುಖವನ್ನು ನೋಡಿದರೆ ನನಗೆ ಬಹಳ ಸಂಕಟವಾಗುತ್ತಿರುವದು. ಅದೇನು ಜಾಗ್ರತೆಯಾಗಿ ಹೇಳು ?.

ಮಲ್ಲಯ್ಯ— ಅವ್ವಾ, ಹುಲಿ - ಕರಡಿಗಳಿಗೆ ನಾನು ಹೆದರತಕ್ಕವನಲ್ಲ. ಹೊಟ್ಟೆಯ ಹಸುವಿಗಾಗಿ ನಿಮ್ಮ ಮಾವನಾದ ಹೇಮರಡ್ಡಿಯ ಮನೆಗೆ ತುತ್ತು ಪ್ರಸಾದಕ್ಕಾಗಿ ಹೋಗಿದ್ದೆನು. ಆ ನಿನ್ನ ನಗೆವೆಣ್ಣೆಯು ಒಂದು ಮುದ್ದಿಕೋಲಿನಿಂದ ನನ್ನ ತಲೆಬುರಡಿಯನ್ನು ಒಡೆದನು. ನೋಡು ರಕ್ತವು ಹೇಗೆ ಸೋರುತ್ತಿರುವದು.

ಮಲ್ಲಮ್ಮ— ಸ್ವಾಮಿ, ಸಾಕು ದುಃಖಿಸಬೇಡ. ನನ್ನ ಪ್ರಾಣವಿರುವ ವರೆಗೂ ನಿನ್ನ ಪಾದಸೇವೆಯನ್ನು ಮಾಡುವೆನು. ನಿನ್ನ ಸೇವೆಯಲ್ಲಿ ಎಂದು ದ್ರೋಹವನ್ನು ಮಾಡುವೆನೋ ಆ ದಿನವೇ ನಿನ್ನ ಪಾದ-ಸಾಕ್ಷಿಯಾಗಿ ಪ್ರಾಣತ್ಯಾಗವನ್ನು ಮಾಡಿಕೊಳ್ಳುವೆನು !

ಮಲ್ಲಯ್ಯ— ಅವ್ವಾ, ನೀನು ಪ್ರಾಣವನ್ನು ಕಳೆದುಕೊಳ್ಳುವದು ಹಾಗಿರಲಿ; ಇಗೋ ನೋಡು ಬೆಂಕಿಯಿಂದ ನನ್ನ ಮೈಯನ್ನೆಲ್ಲ ಸುಟ್ಟಿರುವರು. ಘಾಯಗಳು ಹೇಗೆ ಕಾಣುವವು. ಈ ಸಂಕಟ ವನ್ನು ಹೇಗೆ ಸೈರಿಸಲಿ ?

ಮಲ್ಲಮ್ಮ— ಹೌದು ಹೌದು ಸ್ವಾಮಿ, ಈ ಘಾಯಕ್ಕೆ ಸ್ವಲ್ಪ ಭಸ್ಮವನ್ನು ಧರಿಸುವೆನು ಸಮಾಧಾನ ಮಾಡಿರಿ.

ಮಲ್ಲಯ್ಯ— ತಾಯಿ, ಅಷ್ಟಾವರಣಾಂತರ್ಗತವಾದ ಭಸ್ಮವನ್ನು ಧರಿಸು ವೆಯಾ ? ಅಹಾ ! ಅಷ್ಟಾವರಣದಲ್ಲಿ ಭಸ್ಮವಾದರೂ ಶ್ರೇಷ್ಠವೇ ಆಗಿ ರುವದು. ಅನಂತಕೋಟಿ ಯಜ್ಞಗಳನ್ನು ಮಾಡುವದರಿಂದಲೂ ಅನಂತ ತಪಸ್ಸುಗಳನ್ನು, ಅನಂತ ತೀರ್ಥಯಾತ್ರಾದಿಗಳನ್ನು ಆಚರಿ ಸುವದರಿಂದಲೂ ಯಾವ ಪುಣ್ಯವು ಲಭಿಸುವದೋ ಅದಕ್ಕಿಂತಲೂ ಅಧಿಕವಾದ ಪುಣ್ಯವು ಭಸ್ಮಧಾರಣದಿಂದ ಬರುವದು. ಭಸ್ಮಧಾರಣವು ಸಕಲ ಪಾಪಗಳನ್ನು ದೂರಮಾಡಿ, ಅನಂತ ಲೌಕಿಕ ಸುಖಗಳನ್ನು ಕೊಡುವದಲ್ಲದೆ ಮೋಕ್ಷ ಸುಖವನ್ನು ಕೊಟ್ಟು ಕೃತಾರ್ಥರನ್ನು ಮಾಡಲು ಅತ್ಯಂತ ಸಮರ್ಥವಾಗಿರುವದು ! ತಾಯಿ, ಬಹಳ ಹೇಳು ವದೇನು ಯಾವ ಶಿವಭಕ್ತನು ಪ್ರತಿ ದಿವಸದಲ್ಲಿ ತಪ್ಪದೇ ಭಸ್ಮವನ್ನು ಧರಿಸಿಕೊಂಡಿರುವನೋ ಆ ಶಿವಭಕ್ತನು ಸಾಕ್ಷಾತ್ ಶಿವನೇ ಎಂದು




ಮಲ್ಲಮ್ಮನು ಮಲ್ಲಿಕಾರ್ಜುನನಿಗೆ ಭಸ್ಮವನ್ನು ಹಚ್ಚುವಳು.
ಇವರೀರ್ವರನ್ನು ಕಡಿಯಲು ಭರಮರಡ್ಡಿಯು ಕೊಡಲಿಯನ್ನು ಎತ್ತುವನು.

ಶಿವಾಗಮಗಳ ಸಿದ್ಧಾಂತವದೆ ! ತಾಯಿ, ಭಸ್ಮದ ಮಹಿಮೆಯನ್ನೂ ಹೇಳುವೆನು ಕೇಳು.

ಶ್ಲೋ :— ಶಿವ ಮಂತ್ರಾತ್ಪರೋಮಂತ್ರ ಸ್ತತ್ವಂಚಾಪಿ ಶಿವಾತ್ಪರಂ।
ಶಿವಾರ್ಚನಾತ್ಪರಂ ಪುಣ್ಯಂ ನಹಿತೀರ್ಥಂಚ ಭಸ್ಮನಃ ॥
ರುದ್ರಾಗ್ನೇರ್ಯತ್ಪರಂ ವೀರ್ಯಂ ತದ್ಭಸ್ಮ ಪರಿಕೀರ್ತಿತಂ । ಧ್ವಂಸನಂ ಸರ್ವದುಃಖಾನಾಂ । ಸರ್ವ ಪಾಪ ವಿಶೋಧನಂ ॥

ಆದ್ದರಿಂದ ಪರಮ ಶಿವಭಕ್ತಳಾದ ನಿನ್ನ ಹಸ್ತದಿಂದ ಭಸ್ಮವನ್ನು ಧರಿಸಿ ನನ್ನ ಕಷ್ಟವನ್ನು ಪರಿಹರಿಸು.

(ನಂಬರ ೪೧) ಪದ ರಾಗ – ಆನಂದ ಭೈರವಿ ತಾಲ – ತ್ರಿತಾಲ

ಮಲ್ಲಮ್ಮ—ಗುರುದೇವ ಸಹಿಸೋ ¦ ಸಂತಾಪವ ॥
ಗುರು ಶ್ರೀ ಮಲ್ಲೇಶನ ಪಾದವ ನೆನಿಯುತೆ ನಾ ॥
ಶಾಂತಿಯ ವಹಿಸು ತಾತ | ಸಂತೋಷದಿ ಧರಿಸುವೆ ನಾ ॥
ಸಂತೈಸುತ ಭಸ್ಮವನು ॥೧॥

ಮಲ್ಲಯ್ಯ— ಆಹಹ ! ಈಗ ಸಮಾಧಾನವಾಯಿತು. ಹೊಟ್ಟೆಯು ಮಾತ್ರ ಬಹಳ ಹಸಿದಿರುವದು. ಜಾಗ್ರತೆಯಾಗಿ ಊಟಕ್ಕೆ ಏನಾದರೂ ಇದ್ದರೆ ಕೊಡು. ಸಂಕಟವನ್ನು ತಡೆಯಲಾರೆ !

ಮಲ್ಲಮ್ಮ— ಸ್ವಾಮಿ, ಏನಿರುವದು ? ತಂಗಳ ಅಂಬಲಿಯು ಮಾತ್ರ ಇರುವದು. ಅದನ್ನೇ ಊಟಮಾಡು. ಆನಂತರ ಗೋವುಗಳನ್ನು ಹಿಂಡಿಕೊಂಡು ಬಂದು ಹಾಲನ್ನು ಕುಡಿಸುವೆನು.

ಮಲ್ಲಯ್ಯ— ಅವ್ವಾ, ಈ ಹಳಸಿದ ಅಂಬಲಿಯನ್ನು ಉಣಲೋ ?

ಭರಮರಡ್ಡಿ— ಹೂಂ, ಅಂಬಲಿಯಾಕೆ ಉಣ್ತೆಯೋ ನನ ಸರ್ದಾರ. ಹೋಳಿಗಿ - ತುಪ್ಪ ಉಣ್ಣು ತಡಿ ತಡಿ !

ಮಲ್ಲಯ್ಯ— ಅವ್ವಾ, ಹೊರಗೆ ಏನೋ ಗಲಭೆಯಾಗುವಂತೆ ಕಾಣುವದು ಹೋಗಿ ನೋಡಿಕೊಂಡು ಬಾ, ನಾನು ಇಲ್ಲಿಯೇ ಕುಳಿತುಕೊಂಡು ಊಟವನ್ನು ಮಾಡುವೆನು.

ಮಲ್ಲಮ್ಮ— ಸ್ವಾಮಿ, ಹೆದರಬೇಡ. ಸಮಾಧಾನದಿಂದ ಊಟ ಮಾಡು ನಾನು ಹೋಗಿ ನೋಡಿಕೊಂಡು ಬರುವೆನು.

( ನಂಬರು ೪೨ ) ಪದ ರಾಗ– ಕಾಂಬೋದಿ ತಾಲ– ದಾದರಾ

ಮಲ್ಲಯ್ಯ—ಹೇಮರಡ್ಡಿ ಮಲ್ಲವ್ವನಾ| ಸಾಂಬ ಭಕ್ತಿಯ ಪೇಳಲೆಂತು ನಾ||
ಈ ಮಹತ್ವದ ಹಳಸಿದಂಬಲಿ |
ಪ್ರೇಮ ತೋರುವದವ್ವಾ ಮಲ್ಲವ್ವಾ ||೧||
ಅಂಬಲಿಯನು ಹಂಬಲಿಸುತ | ಬೆಂಬಿಡದೆ ಓಡಿಬಂದೆನವ್ವ ||
ತುಂಬಲಾರೆನು ಯಂಬವುದರವ |
ತುಂಬಿಕೊಳ್ಳುವೆನವ್ವಾ ಮಲ್ಲವ್ವಾ ||೨||

ಆಹಾ ! ಪೂರ್ವದಲ್ಲಿ ನನ್ನ ಭಕ್ತರಾದ ಅಮ್ಮವ್ವ, ಪಿಟ್ಟವ್ವ, ನಿಂಬೆಕ್ಕ ಮೊದಲಾದ ಶಿವಶರಣಿಯರು ನನಗೆ ಉಣಿಸಿದ ಮೃಷ್ಟಾನ್ನಕ್ಕಿಂತಲೂ ಮಲ್ಲವ್ವನು ಕೊಟ್ಟಿರುವ ತಂಗಳ ಅಂಬಲಿಯು ಅಧಿಕವಾಗಿ ರುಚಿ ಸುತ್ತಿರುವದಲ್ಲಾ. ಧನ್ಯರು ! ಶಿವಭಕ್ತರು ಧನ್ಯರು ! !

ಭರಮರಡ್ಡಿ— ಎಲೇ ಮಲ್ಲ್ಯಾ ! ಕಳ್ಳ್ಯಾ ! ಶಿಕ್ಯಾ ಇಗೋ ನೋಡು !
(ಹೊಡೆಯುವದಕ್ಕೆ ಹೋಗಲು ಅದೃಶ್ಯ)

ಇದೇನಪಾ ಅಂತೇನಿ. ಎದುರಿಗೆ ಇದ್ದವನು ತಕ್ಷಣ ಮಾಯವಾದನು. ಇವನು ಮಹಾಪುರುಷ. ನನ್ನ ಹೆಣ್ತೆವ್ವಾದರೂ ವ್ಯಭಿಚಾರಿಣೆ ಅಲ್ಲ. ಮನಿಯವರು ನಿಷ್ಕಾರಣವಾಗಿ ದೋಷವನ್ನು ಹೊರಿಸಿರುವರು. ಇವರ ಅಗಾಧವಾದ ಲೀಲೆಯನ್ನು ಅವ್ವನಮುಂದೆ ಹೇಳಿ, ಇವರೀರ್ವರನ್ನು ಮನೆಗೆ ಕರೆದುಕೊಂಡು ಬಾ ಅಂತ ಹೇಳ್ತೇನಿ. ಗಡಗಡ ಮನಿಗೆ ಹೋಗ್ತೇನಿ. ( ಹೋಗುವನು )

ಮಲ್ಲಮ್ಮ— ಇದೇನು ? ನನ್ನ ಸ್ವಾಮಿಯ ಕಾಣುವದಿಲ್ಲ, ದೇವಾ ಊಟ ಮಾಡುವದನ್ನು ಬಿಟ್ಟು ಎಲ್ಲಿ ಹೋಗಿರುವಿ ? ಬಡವೀ ಮನೆಯ ಹಳಸಿದ ಅಂಬಲಿಯನ್ನು ಉಣ್ಣಲಾರದೆ ಹೋಗಿರುವೆಯಾ?

(ನಂಬರು ೪೩) ಪದ ರಾಗ- ದೇಶಿ ತಾಲ- ಕೇರವ

ಗುರುವೆ ಭರದಿ ಬಾರೋ ! ಹರುಷದ ಮುಖವ ತೋರೋ |
ಅರಿಯದ ಬಾಲೆಯೊಳಿಂಥ ಕ್ರೂರತನವು ಬೇಡ ತಾತ |
ಬಾ ಬಾರೋ ||೧||
ಕರಡಿ-ಹುಲಿಯ ನೋಡೀ | ಭರದಿಂದ ಮುಖವು ಬಾಡೀ |
ಭರದಲಿ ಬಂದಿಹವೋಡಿ | ಭೋರನೆ ಪೇಳ್ ದಯನೀಡೋ
ಬಾ ಬಾರೋ ||೨||

ಸ್ವಾಮಿ, ಊಟವನ್ನು ಮಾಡುವದು ಬಿಟ್ಟು ಎಲ್ಲಿ ಹೋಗಿದ್ದಿ?

ಮಲ್ಲಯ್ಯ— ಅವ್ವಾ, ನಾನೊರ್ವನೆ ಇಲ್ಲಿ ಕುಳಿತುಕೊಂಡು ಊಟ ಮಾಡುವದಕ್ಕೆ ಭಯಗೊಂಡು ನಿನ್ನನ್ನೇ ಹುಡುಕುತ್ತ ಹೋಗಿದ್ದೆನು.

ಮಲ್ಲಮ್ಮ-- ಸ್ವಾಮಿ, ಇಗೋ ನಾನು ನಿನ್ನ ಸಮೀಪದಲ್ಲಿಯೇ ಕುಳಿತು ಕೊಳ್ಳುವೆನು ಊಟಮಾಡು !

ಮಲ್ಲಯ್ಯ— ಅವ್ವಾ, ಜಗತ್ತಿನಲ್ಲಿ ನನಗೆ ನಿನ್ನಂತೆ ಪ್ರೀತಿಯಿಂದ ಉಣಿಸಿದ ಮಹಾತ್ಮರು ಯಾರೂ ಇಲ್ಲ ! ತಾಯಿ, ನಿನ್ನ ಉಪಕಾರವು ವಿಶೇಷವಾಯಿತು. ನಿನ್ನ ವೈರಿಗಳಿಗೆ ತಕ್ಕ ಪ್ರಾಯಶ್ಚಿತ್ತನ್ನು ಮಾಡಿ ನಿನ್ನ ಋಣವನ್ನು ತೀರಿಸಿ ಋಣಮುಕ್ತನಾಗುವೆನು. ಇದಕ್ಕೇನು ಹೇಳುವೆ ?

ಮಲ್ಲಮ್ಮ— ಪರಮಾತ್ಮಾ, ಈ ಜಗತ್ತಿನಲ್ಲಿ ನನಗೆ ವೈರಿಗಳೇ ಇಲ್ಲ !

ಮಲ್ಲಯ್ಯ— ಅವ್ವಾ,ಯವ್ವನವತಿಯಾದ ನಿನ್ನನ್ನು ಗಂಡನಿಂದ ಅಗಲಿಸಿ, ಸಕಲ ಸಂಪತ್ತನ್ನು ತೊಲಗಿಸಿ, ದನಗಳನ್ನು ಕಾಯುವದಕ್ಕಾಗಿ ಅಡವಿಗೆ ಕಳುಹಿಸಿರುವ ಆ ನಿನ್ನ ಅತ್ತಿಯೂ ನಗೆವೆಣ್ಣಿಯರೂ ನಿನಗೆ ಕೇವಲ ವೈರಿಗಳಲ್ಲವೇ ?

ಮಲ್ಲಮ್ಮ— ಸ್ವಾಮಿ, ಮಹತ್ವವಾದ ಗೋಸೇವೆಯನ್ನು ಮಾಡುವದಕ್ಕಾಗಿ ಕಳುಹಿಸಿದ ಆ ನನ್ನ ಬಂಧುಗಳು ನನಗೆ ವೈರಿಗಳೆಂದು ತಿಳಿದುಕೊಂಡಿರುವೆಯಾ ? ಅಲ್ಲ; ಅಲ್ಲ; ಅವರು ನನಗೆ ಖಂಡಿತವಾಗಿ ಶತ್ರುಗಳಲ್ಲ !

ಮಲ್ಲಯ್ಯ— ಅಮ್ಮಾ, ಗೋಸೇವೆಯು ಸಾಧಾರಣ ಜನರಿಗೆ ದೊರೆಯುವದೆಂದು ತಿಳಿದುಕೊಂಡಿರುವೆಯಾ? ಇಲ್ಲ; ಇಲ್ಲ; ಕೇವಲ ಪುಣ್ಯವಂತರಿಗೂ ಮಹಾಪತಿವ್ರತೆಯರಿಗೂ ಮಾತ್ರ ದೊರೆಯುವದು. ಅದರ ಮಹತ್ವವನ್ನು ಹೇಳುವೆನು ಕೇಳು.

ಪದ್ಯ :— ಗೋ ಸೇವೆಯಿಂದ ದೊರೆಯುವದು ಮಹಾ ಪುಣ್ಯವಮ್ಮಾ | ಗೋಸೇವೆಗಿಂದಧಿಕ ತಪವಿಲ್ಲ ತಾಯೀ | ಗೋ ಸೇವೆಯಿಂದಖಿಲ ವಿಖ್ಯಾತ ಪುರುಷರು ದೇಶದೋಳ್ ಕೀರ್ತಿಯನು ಪಡೆದರಮ್ಮಾ | ಗೋವಿನಂಗದೊಳೆಲ್ಲ ದೇವತೆಗಳಿರ್ಪರೀ | ಗೋವನುಪಚರಿಸಿದೊಡೆ ತೃಪ್ತರಾಗುವರು ತಾಯೀ | ಗೋವು ಮುಖವಿಟ್ಟ ಗೋದಾವರಿಯು ತಾನೀಗಾ ಪಾವನವಾಗಿ ಮೆರೆವದಮ್ಮಾ | ಗೋಕರ್ಣ ಗೋಗರ್ಭ ಗೋಮುಖಗಳೆಂದು ಪುಣ್ಯ ಕ್ಷೇತ್ರವಾಗಿರುವವಮ್ಮಾ ||೧||

ಗೋಸೇವೆಯ ಮಹತ್ವವು ಹೀಗಿರುವದು. ಆ ನೀಚರಿಂದ ಇದು ನಿನಗೆ ದೊರೆದಿರುವದೆಂದು ತಿಳಿದಿರುವೆಯಾ? ಸುಳ್ಳು; ಸುಳ್ಳು; ನಾನು ಈಗಲೇ ಹೋಗುವೆನು. ಖಂಡಿತವಾಗಿ ನನ್ನನ್ನು ತಡೆಯಬೇಡಾ!

ಮಲ್ಲಮ್ಮ— ಸ್ವಾಮಿ, ಖಂಡಿತವಾಗಿ ಹೋಗಬೇಡ! ರೊಟ್ಟೆಯನ್ನು ಕೊಡದೆ ಇದ್ದುದಕ್ಕಾಗಿ ಹೊಟ್ಟೆಕಿಚ್ಚಿನ ಅಯ್ಯನು ನಮ್ಮನ್ನು ಬೈದಾಡುವನೆಂದು ನಿನಗೆ ಲೋಕದಲ್ಲಿ ಅಪವಾದವನ್ನು ಹೊರಿಸುವರು. ಹೋಗಬೇಡ ಶರಗೊಡ್ಡಿ ಬೇಡಿಕೊಳ್ಳುವೆನು.

ಮಲ್ಲಯ್ಯ— ಅಮ್ಮಾ, ನನಗೆ ಲೋಕದಲ್ಲಿ ಅಪವಾದ ಬರುವದೆಂದು ಹೇಳುವೆಯಾ? ಬಂದರೂ ಬರಲಿ. ಮಹಾ ಪತಿವ್ರತೆಯಾದ ನಿನಗೆ ವ್ಯಭಿಚಾರ ದೋಷವನ್ನು ಹೊರಿಸಿದ ಆ ನೀಚರಿಗೆ ತಕ್ಕ ಪ್ರಾಯಶ್ಚಿತ್ತ ಮಾಡಿ ಬರುವ ವರೆಗೆ ನೀನು ಕೊಟ್ಟಿರುವ ಈ ಮಹಾಪ್ರಸಾದವನ್ನು ನನ್ನ ಭಕ್ತರ ಸಾಕ್ಷಿಯಾಗಿ ನಾನು ಸ್ವೀಕರಿಸುವದಿಲ್ಲ! ಇಗೋ ಈ ನಿನ್ನ ಅಂಬಲಿಯು ನಿನ್ನಲ್ಲಿಯೇ ಇರಲಿ. ನಾನು ಹೋಗುವೆನು.

(ಹೋಗುವನು)

ಮಲ್ಲಮ್ಮ— ಸ್ವಾಮಿ, ಹೋದೆಯಾ ! ನೀನು ಬಂದು ಊಟಮಾಡುವ ವರೆಗೂ ನಿನ್ನ ಪಾದಸಾಕ್ಷಿಯಾಗಿ ನಾನೂ ಊಟಮಾಡುವದಿಲ್ಲ ! ಏಕಂದರೆ "ಭಕ್ಷ್ಯಭೋಜ್ಯಾದಿವಸ್ತೂನಿ । ಯೋಭುಂಕ್ತೆ ಚರವರ್ಜಿತಃ ॥ ಸಭುಂಕ್ತೆ ಮಲ - ಮಾಂಸಾದಿಶ್ಚ ಪಾಕಾಗಾರ ಸಂಭವಂ"
ಜಂಗಮ ಮೂರ್ತಿಗಳಿಲ್ಲದೆ ಭಕ್ಷ್ಯ- ಭೋಜ್ಯಾದಿ ಸಕಲ ಪದಾರ್ಥಗಳನ್ನು ಭುಂಜಿಸಬಾರದೆಂಡು ಪ್ರಮಾಣವಿರುವದು. ಆದ್ದರಿಂದ ನೀನು ಬರುವ ವರೆಗೂ ನಿನ್ನ ಪ್ರಸಾದವನ್ನು ಹಾಗೆಯೇ ಕಾಯದು ಕೊಂಡಿರುವೆನು,

(ವೇಮರಡ್ಡಿಯ ಪ್ರವೇಶ)

(ನಂಬರ ೪೪) ಪದ ರಾಗ– ಭೈರವಿ ತಾಲ– ತ್ರಿತಾಲ

ವೇಮ— ಹರಡುವೆಯನ್ನಯ ಶೋನ್ನತಿಯ । ವರಜನ ಪ್ರೀತಾ ।
ನಾಧನ ತಾತ | ನಾಥ ಪೂತಶ್ರಿತ । ತೋರುವೆ ಘನ ತಾ ||
ಲೋಕದಿ ನಾನೇ | ಲೋಕದ ಧನಿಕ ।
ನೇಕಾನುಧರಣಿಯೊಳಧಿಕ ||೧||

ಈ ಸಿದ್ದಾಪುರ ಗ್ರಾಮಕ್ಕೆ ಪ್ರುಬಲ ಸಾಹುಕಾರರೆಂದು ಪ್ರಸಿದ್ಧರಾಗಿರುವೆವು. ಹೀಗಿದ್ದು ನಮ್ಮ ತಂದೆಯಾದ ಹೇಮರಡ್ಡಿ, ನನ್ನ ಅಣ್ಣಂದಿರಾದ ನಾಲ್ಕು ಜನರು ಸಹ ಹಗಲೂ ರಾತ್ರಿಯೂ ವ್ಯವಸಾಯದ ಕೆಲಸದಲ್ಲೇ ಇರುವರು. ಇಂಥ ಕುರೂಪಿಗಳು ಈ ಜಗತ್ತಿನಲ್ಲಿ ಹುಟ್ಟಿ ಫಲವೇನು ? ಈ ಪಟ್ಟಣದ ಜನರೆಲ್ಲರೂ ಹೇಮರಡ್ಡಿಯ ಚಿಕ್ಕ ಮಗನಾದ ವೇಮರಡ್ಡಿಯು ಬಹಳ ನಾಗರಿಕ ಪುರುಷನೆಂದು ಕೊಂಡಾಡುತ್ತಿರುವರು ! ಕಾರಣ ಊರಲ್ಲಿ ಯಾವಳಾದರೊಬ್ಬ ನಾಗಸಾನಿಯ ಮನೆಯನ್ನು ಹುಡುಕುತ್ತಾ ಹೋಗುವೆನು.

(ಹೋಗುವನು)

ವೇಶ್ಯಾಗೃಹ :—

ನಂಜುಂಡರಾವ— ನಮ್ಮ ಅಕ್ಕ ಲೋಕಸುಂದರಿಗೆ ಪ್ರತಿ ದಿವಸದ

ಲ್ಲಿಯೂ ವಿಟ – ಪುರುಷರನ್ನು ಹುಡುಕಿ ತಂದೂ ತಂದೂ ಬೇಸ ತ್ತಿನು. ಆಕಸ್ಮಾತ್ ಒಂದು ದಿವಸ ಸಿಗದಿದ್ದರೆ ಆ ದಿವಸ ನನಗೆ ಅನ್ನವೇ ಸಿಗುವದಿಲ್ಲ. ಈ ಸಿದ್ದಾಪುರದಲ್ಲಿರುವ ವಿಟಪುರುಷರು ಆದಂತಾದರು. ಸುತ್ತುಮುತ್ತು ಹಳ್ಳಿಗಳೂ ಕೂಡಾ ಆದವು. ನನ್ನ ಜೀವ ಇರುವ ವರೆಗೂ ಈ ಕೆಲಸವನ್ನು ಹೇಗೆ ನಡಿಸಲಿ ? ಏನಾದರೂ ಆಗಲಿ. ಈ ದಿನದ ಬೇಟೆಗೆ ಯಾರನ್ನು ಹುಡುಕಲಿ ? ಓಹೋ ! ಇಲ್ಲಿ ಯಾರೋ ಬರುವಂತೆ ಕಾಣುವದು. ಬರಲಿ, ಬರಲಿ ನೋಡುವಾ !

(ವೇಮರಡ್ಡಿಯ ಪ್ರವೇಶ)

ವೇಮು— ಎಲೋ ನೀನು ಯಾರು ?

ನಂಜುಂಡಿ— ನಾನು ಸ್ವಾಮಿ, ನಾನು !

ವೇಮು— ನಾನು ಅಂದರೆ ಯಾರು ?

ನಂಜುಂಡಿ— ನಾನೊಬ್ಬವನು ಹೀಗೇ !

ವೇಮು— ಹೀಗೋ ಹಾಗೋ ?

ನಂಜುಂಡಿ— ಹೂ, ಹೀಗೂ ಸೈ ; ಹಾಗೂ ಸೈ ! ಅಂದರೆ ಅರ್ಥವಿಲ್ಲದವನು ಅಂತ !

ವೇಮು— ಅಯ್ಯಾ, ಅರ್ಥವಿಲ್ಲದವನು ಅಂದರೆ ಏನು ?

ನಂಜುಂಡಿ— ಅರ್ಥವಿಲ್ಲದವನು ಅಂದರೆ, ದುಡ್ಡು ಇಲ್ಲದವನು ಸ್ವಾಮಿ! ನೀವು ದುಡ್ಡುಳ್ಳವರಾದ್ದರಿಂದ ಅರ್ಥವುಳ್ಳವರು ಅಂತ.

ವೇಮು— ಎಲೋ ಆದಿರಲಿ. ನಿನ್ನ ಹೆಸರೇನು ?

ನಂಜುಂಡಿ— ನನ್ನ ಹೆಸರೆ, ಹೂ. ಹಾಗಾದರೆ ಬರೆಸುಕೊಳ್ಳಿ.

ವೇಮು— ಹೆಸರನ್ನು ಏತಕ್ಕೆ ಬರೆದುಕೊಳ್ಳಬೇಕು ?

ನಂಜುಂಡಿ— ಸಾಹುಕಾರರೇ, ನನ್ನ ಹೆಸರನ್ನು ಹಿಂದಿನಿಂದ ಹೇಳುವೆ. ಮೊದಲು ನಿಮ್ಮ ಗ್ರಾಮ ಯಾವದು ? ಮತ್ತು ಹೆಸರೇನು ? ಹೇಳಿ ದರೆ ನಾನು ಒಂದು ಲಿಸ್ಟು ಮಾಡಿಕೊಳ್ಳುವೆನು.

ವೇಮ— ಅಯ್ಯಾ! ನನ್ನ ಹೆಸರನ್ನು ಏತಕ್ಕೆ ಬರೆದುಕೊಳ್ಳುವಿ ?

ನಂಜುಂಡಿ— ನಮ್ಮ ಖಾತೇ ಬುಕ್ಕಿನಲ್ಲಿ ನಿಮ್ಮ ಹೆಸರು ಎಷ್ಟನೇ ಕುಳಕ್ಕೆ ಸೇರುತ್ತದೆಯೋ ನೋಡಿ, ಆ ಕುಳಕ್ಕೆ ನಮ್ಮಕ್ಕನವರಿಂದ ನಂಬರ ಹಾಕಿಸುತ್ತೇನೆ ನಂಬರ!

ವೇಮ— ಆಗಲಿ ಬರೆದುಕೋ. ನನ್ನದು ಇದೇ ಸಿದ್ದಾಪುರ ಗ್ರಾಮವು ನಾವು ಸಾಹುಕಾರರು; ನನ್ನ ಹೆಸರು ವೇಮರಡ್ಡಿಯು.

ನಂಜುಂಡಿ— ನೀವು ಇದೇ ಊರ ಸಾಹುಕಾರರೋ ? ಬಹಳ ಅನುಕೂಲವಾಯಿತು. ಈ ನಿಮ್ಮ ಚರಿತ್ರೆಯನ್ನು ನಮ್ಮ ಅಕ್ಕನವರ ಮುಂದೆ ಹೇಳುವೆನು.

ವೇಮ— ಎಲೋ, ನಿಮ್ಮ ಅಕ್ಕ ಯಾರು ? ಅವಳ ಹೆಸರೇನು ?

ನಂಜುಂಡಿ— ಊಂ ಹು ಅವಳು-ಇವಳು ಅನ್ನಬೇಡಿರಿ. ಅವರು ಮಹರಾಜ ರಾಜೇಶ್ರೀಗಳಿರುವರು! ನನ್ನ ಹೆಸರು ಬರೆದುಕೊಳ್ಳಿ ಹೇಳುವೆನು. ತ್ರಿಪುರಸುಂದರಿಯೆಂಬ ನಗರ ವೇಶ್ಯಳ ಹೊಟ್ಟೆಯಲ್ಲಿ ಹುಟ್ಟಿದ, ಲೋಕಸುಂದರಿಯೆಂಬ ಗ್ರಾಮ ವೇಶ್ಯಗೆ ತಮ್ಮನಾದ, ಬಹದ್ದೂರ ನಂಜುಂಡರಾವ್ ಎಂಬುವದೇ ನನ್ನ ಹೆಸರು!

ವೇಮ— ಅಯ್ಯಾ, ನಗರವೇಶ್ಯ- ಗ್ರಾಮವೇಶ್ಯ ಎಂದು ಎರಡು ಶಬ್ದಗಳನ್ನು ಹೇಳುವೆಯಲ್ಲ; ಇದರ ಅರ್ಥವೇನು ?

ನಂಜುಂಡಿ— ನಗರವೇಶ್ಯ ಅಂದರೆ ಪಟ್ಟಣದ ಸೂಳೆ, ಗ್ರಾಮವೇಶ್ಯ ಅಂದರೆ ಊರ ಸೂಳೆ!

ವೇಮ— ಅಸ್ತು. ನಿಮ್ಮ ಅಕ್ಕನನ್ನು ಬರಮಾಡುವೆಯಾ ?

ನಂಜುಂಡಿ— ಓಹೋ ಕರೆಯುವೆನು. ಅಕ್ಕಾ, ಅಮ್ಮಕ್ಕಾ! ಸಾಹುಕಾರರು ಬಂದಿರುವರು. ಬಾ ಹು ಹೂ ಹೂ ಹೂ!

( ಲೋಕಸುಂದರಿಯು ಪ್ರವೇಶ )

ಲೋಕ— ನಂಜುಂಡಿ, ಈ ಸಾಹುಕಾರರು ತಮ್ಮಲ್ಲಿರುವ ಆಭರಣಗಳನ್ನು ನಮಗೆ ಒಪ್ಪಿಸಿ ನಮ್ಮ ಇಷ್ಟದಂತೆ ವರ್ತಿಸಬೇಕಾಗುವದಲ್ಲಾ ?

ವೇಮ— ಓಹೊ! ಅಗತ್ಯ ಆಗಲಿ. ಇಗೋ ಈ ಆಭರಣಗಳನ್ನು ತೆಗೆ ದುಕೊ! ಮತ್ತೇನು? (ಆಭರಣ ಕೊಡುವನು).

ನಂಜುಂಡಿ— ಅಕ್ಕಾ, ಸಾಹುಕಾರರು ತಮ್ಮಲ್ಲಿದ್ದ ಆಭರಣಗಳನ್ನೆಲ್ಲ ಕೊಟ್ಟಿರುವರು, ಇಗೋ ತೆಗೆದುಕೋ (ಕೊಡುವನು.)

ಲೋಕ— ನಂಜುಂಡಿ, ಇಷ್ಟರಿಂದ ನಮ್ಮ ಮನಸ್ಸು ಹೇಗೆ ತೃಪ್ತವಾಗ ಬೇಕು! ಇವರು ನಾಳೆ ನಮ್ಮ ಮನೆಗೆ ಬರಲಿ. ಆ ಕಾಲಕ್ಕೆ ತಮ್ಮ ಮನೆಯ ಹೆಣ್ಣುಮಕ್ಕಳ ಮೈಮೇಲಿರುವ ಆಭರಣಗಳನ್ನು ತೆಗೆದು ಕೊಂಡು ಬರವಂತೆ ಹೇಳು

ನಂಜುಂಡಿ— ಸಾಹುಕಾರರೇ, ಈಗ ತಾವು ಕೊಟ್ಟ ಆಭರಣಗಳಿಂದ ರಾಜೇಶ್ರಿಗಳವರ ಮನಸ್ಸು ತೃಪ್ತವಾಗಲಿಲ್ಲ! ಕಾರಣ ಈಗಿಂದೀಗ ನೀವು ಮನೆಗೆ ಹೋಗಿ ನಿಮ್ಮ ಹೆಣ್ಣುಮಕ್ಕಳ ಮೈಮೇಲಿರುವ ಆಭ ರಣಗಳನ್ನು ತೆಗೆದುಕೊಂಡು ಬರಬೇಕಲ್ಲಾ?

ವೇಮ— ಇದೇನು ಅಸಾಧ್ಯವು? ಈಗಿಂದೀಗಲೇ ಹೋಗಿ ನಮ್ಮ ಹೆಂಗಸರ ಆಭರಣಗಳನ್ನೆಲ್ಲಾ ತರುವೆನು. ನೀವು ಅದರ ಚಿಂತೆ ಯನ್ನೇ ಬಿಡಿ!

ಲೋಕ— ಸಾಹುಕಾರರೇ, ಜಾಗ್ರತೆಯಾಗಿ ಮನೆಯ ಆಭರಣಗಳನ್ನು ತೆಗೆದುಕೊಂಡು ಬರುವಿರಾ?

ವೇಮ— ನಿಶ್ಚಯವಾಗಿ ತೆಗೆದುಕೊಂಡು ಬರುವೆನು. ನಡೀರಿ ಹೋಗುವ!

ಲೋಕ— ಎಲ್ಲಿಗೆ?

ವೇಮ— ಏಕಾಂತ ಸ್ಥಳಕ್ಕೆ!

ಲೋಕ— ಏತಕ್ಕೆ?

ವೇಮ— ವಿನೋದಕ್ಕೆ!

ನಂಜುಂಡಿ— ಬಾಯ್ ಬಾಯ್ ಬಡಕೊಳ್ಳಲಿಕ್ಕೋ?

ಲೋಕ— ಉಂಹೂ ಆದಾಗದು! ನೀವು ಮನೆಗೆ ಹೋಗಿ ಆಭರಣಗಳನ್ನು ತಂದಮೇಲೆ ಮುಂದಿನ ವಿಚಾರ. ನಂಜುಂಡಿ ಇಲ್ಲಿ ಬಾ, ಈ ಸಾಹುಕಾರರಿಗೆ ಎಲ್ಲ ವಿಷಯವನ್ನು ಹೇಳಿ ಇವರನ್ನು ಹೊರಗೆ ಕಳುಹಿಸಿ ಬಾ. ನಾನು ಹೋಗುವೆನು. (ಹೋಗುವಳು)

ವೇಮ— ನಂಜುಂಡಿ, ಇದೇನು ನನ್ನನ್ನು ಧಿಃಕರಿಸಿ ಹೋದಳಲ್ಲ!

ನಂಜುಂಡಿ— ಸಾಹುಕಾರರೇ ಹಾಗೆ ತಿಳಿಯಬಾರದು. ನೀವು ಹೇಳಿದಂತೆ ಆಭರಣಗಳನ್ನು ತರುವಿರೋ ಇಲ್ಲವೋ ಎಂದು ನಿಮ್ಮ ಮನಸ್ಸನ್ನು ಪರೀಕ್ಷಿಸುವದಕ್ಕಾಗಿ ಹೋದಳು ತಿಳಿಯಿತೋ!

ವೇಮ— ಆಗಲಿ. ಈಗಿಂದೀಗಲೇ ಹೋಗಿ ಆಭರಣಗಳನ್ನು ತೆಗೆದು ಕೊಂಡು ಬರುವೆನು.

( ನಂಬರ ೪೫ ) ಪದ ರಾಗ–ಶ್ರೀ ತಾಲ–ಏಕ

ವೇಮ— ಇವಳೆಂಥ ನಾರಿಮಣಿಯೋ ಧನದಾ। ಆಶೆಯ ।ವಹಿಸಳೊ
ಅನುದಿನದಲಿ ವ್ರತವನು ಗೈದಿಹಳೋ ॥ ನಾನೀಗ ಪೋಗಿ।
ಪ್ರೇಮವ ತೋರಿ | ವನಿತಾಮಣಿ ಸಂಪಾದಿಸುವೆನು
ಮಣಿಯ ॥೧॥

ಲೋಕದಲ್ಲಿ ವೇಶ್ಯಾಸ್ತ್ರೀಯರ ಸ್ಪರ್ಶಸುಖವೇ ಅಧಿಕವಾದದ್ದು! ವೇಶ್ಯಾಗೃಹಕ್ಕೆ ಹೋಗುವ ಪುರುಷರೇ ಧನ್ಯರು! ಒಂದು ಆಲಿಂಗನ ಕೊಡು ಎಂದು ಕೇಳಿದರೆ ನಿಮ್ಮ ಮನೆಯ ಆಭರಣಗಳು ಬಾರದ ವಿನಹ ಆಗದೆಂದು ಹೇಳಿ ಹೊರಟು ಹೋದಳು. ಆದ್ದರಿಂದ ನಾನು ಮನೆಗೆ ಹೋಗಿ ಆಭರಣಗಳನ್ನೆಲ್ಲಾ ತೆಗೆದುಕೊಂಡು ಬರುವೆನು.

(ಹೋಗುವನು)

## ದ್ವಿತೀಯಾಂಕ ಸಮಾಪ್ತ.

---

## — ತೃತೀಯಾಂಕ —

### ೩ ನೇ ಪ್ರವೇಶ

(ಪದ್ಮವ್ವ, ನಾಗಮ್ಮ, ಲಿಂಗಮ್ಮ, ಬಸಮ್ಮ ಇರುವರು.
ಭರಮರಡ್ಡಿಯ ಪ್ರವೇಶ )

ಭರಮರಡ್ಡಿ— ಅವ್ವಾ, ಹಣ್ತೆವ್ವ ವ್ಯಭಿಚಾರಿ ಅಲ್ಲವ್ವ! ಮಲ್ಲಯ್ಯನಾದರೂ ಮಹಾಪುರುಷನೇ ಇರುವನು! ಹೋಗಿ ಮಲ್ಲವ್ವ ಮಲ್ಲಯ್ಯನನ್ನು ಮನೆಗೆ ಕರ್ಕೊಂಡು ಬಾರವ್ವಾ.

ಪದ್ಮವ್ವ— ಎಲೋ, ನಪುಂಸಕನೆ ಕೈಲಾಗದ ಹೇಡಿಯಂತೆ ಹಿಂದಕ್ಕೆ ಬಂದು ಆ ಕುಲಕಂಟಕಿಯನ್ನು ನನ್ನ ಎದುರಿಗೆ ಕೊಂಡಾಡುವೆಯಾ? ಸಾಕು ಬಾಯಿ ಮುಚ್ಚು! ಜನರು ಕೇಳಿದರೆ ಪರಿಹಾಸ್ಯಮಾಡುವರು. ಹೋಗು ಸುಮ್ಮನೆ ಮನೆಯಲ್ಲಿ ಬಿದ್ದಿರು.

( ದಬ್ಬುವಳು )

( ನಂಬರ ೪೫ ) ಪದ ರಾಗ – ಭೀಮಪ್ಲಾಸ ತ್ರಿತಾಲ

ಬಸವ್ವ— ಏನು ಹೇಳಲಿ | ನಾನೂ | ಪ್ರಾಣನಾಥನು |
ಬಾರದಿರ್ಪನು | ಹೀನ ದೈವವಾ | ಮಾನಿನಿಯಳು ನಾ ||೧||

ಅತ್ತೆಯವರೆ ಏನು ಹೇಳಲಿ! ಈಗ ಮೂರು ತಿಂಗಳಿನಿಂದ ನನ್ನ ಪ್ರಾಣಕಾಂತನು ಮನೆಯನ್ನು ಬಿಟ್ಟು ಸೂಳೆಯ ಮನೆಯನ್ನು ಸೇರಿರುವನು. ಎಂದೋ ಒಂದು ದಿವಸ ಮನೆಗೆ ಬಂದರೆ ಕ್ಷಣವಾದರೂ ನಿಲ್ಲದೆ ಕೈಗೆ ಸಿಕ್ಕದ್ದನ್ನೆಲ್ಲಾ ತೆಗೆದುಕೊಂಡು ಹೋಗುವನು!

ಪದ್ಮವ್ವ— ನೀಚಳೇ! ಅವ್ವನಮುಂದೆ ಇಲ್ಲದ ಸಲ್ಲದ ಮಾತುಗಳನ್ನು ಹೇಳುತ್ತಿರುವೆಯಾ? ನಾನು ಸೂಳೆಯ ಮನೆಯಲ್ಲಿರುವದೇ ನಿಜ!

ಇಗೋ ನಿನ್ನ ಆಭರಣಗಳನ್ನೆಲ್ಲಾ ತೆಗೆದುಕೊಂಡು ಹೋಗುವೆನು ನೋಡು !

( ನಂಬರ ೪೬ ) ಪದ ರಾಗ – ಮಧ್ಯಮಾವತಿ ಆದಿತಾಳ

ದುಷ್ಟೇ ಆಭರಣವ ಸೈಯ್ಯುವೆ ನಾ | ಭುವನವೀರ ನಾ |
ವೇಮರಡ್ಡಿಯು | ತವಕದಿಂದಲೀ | ಬಂದೆನೀಕ್ಷಣಾ ||೧||

ನಾಗಮ್ಮ— ಮೈದುನರೇ, ಅವಳು ಚಿಕ್ಕವಳು. ಅರಿಯದೆ ಏನಾದರೊಂದು ಅಪರಾಧ ಮಾಡಿದರೆ ಅದನ್ನು ಮನ್ನಿಸಬೇಕು.

ವೇಮ— ಓಹೋ! ನೀನು ಮಾತ್ರ ಬಹಳ ಸಂಪನ್ನೆಯಂತೆ ಪಂಚಾಯತಿ ಹೇಳಲಿಕ್ಕೆ ಬಂದಿರುವೆಯಾ ? ನಿನ್ನ ಒಡವೆಗಳನ್ನು ಕೂಡಾ ತೆಗೆದುಕೊಂಡು ಹೋಗುವೆನು ನೋಡು.

(ತೆಗೆದುಕೊಂಡು ಹೋಗುವನು.)

ಪದ್ಮಮ್ಮ— ಬಸಮ್ಮ, ಅಳಬೇಡ ಹೋಗು. ನಿನ್ನ ಗಂಡನ ಈ ದುರಾಚಾರವನ್ನು ನಿಮ್ಮ ಮಾವನ ಮುಂದೆ ಹೇಳು ಹೋಗು. ಅವರಾದರೂ ಇವನಿಗೆ ಬುದ್ಧಿಯನ್ನು ಹೇಳಲಿ. ( ಬಸಮ್ಮನು ಹೋಗುವಳು )

( ನಂಬರ ೪೭ ) ಪದ ರಾಗ – ಕಾಫಿ ತ್ರಿತಾಲ

ಹಾ ವಿಧಿಯೇ ಯಮಗೀ ಗತಿಯಾಯ್ತೆ || ಕುವರನುಮಾಡಿದವ
ರವಿಘ್ನವದು ತಾ || || ಪಲ್ಲ || ಸುವರ್ಣವನ್ನೂ
ನಾಗಮುರಿ ಹರಡೀ | ಸತಿಪತಿಯ ಕದನದೋಳ್ |
ಪೈದನು ತಾ ||೧||

ಪದ್ಮಮ್ಮ— ಅಯ್ಯೋ ! ಐದು ಮಂದಿ ಸೊಸೆಯರಿಗೆ ಮಾಡಿಸಿದ ಒಂಕಿ, ನಾಗಮುರಿ, ಕಂಕಣ, ಹರಡಿಗಳೆಲ್ಲಾ ಸೂಳೆಯ ಮನೆಯನ್ನು ಸೇರಿದವಲ್ಲ ! ಶಿವ ಶಿವ, ಏನು ವಿಪತ್ಕಾಲವು ಪ್ರಾಪ್ತವಾಯಿತು.

ವೇಮ— ಆಹಾ ! ಕೆಲಸವೇನೊ ಸಂಪೂರ್ಣವಾಯಿತು. ಲೋಕದಲ್ಲಿ ಸರ್ವಸುಖಗಳಲ್ಲಿ ವೇಶ್ಯಾಸುಖವೇ ಪ್ರಧಾನವಾದದ್ದು ! ಆದ್ದರಿಂದ ಅನೇಕ ರಸಿಕ ಶಿಖಾಮಣಿಗಳಾದ ತರುಣರು ಪ್ರತಿ ದಿವಸವಲ್ಲಿ ವೇಶ್ಯಾಸ್ತ್ರೀಯರ ಗೃಹಕ್ಕೆ ಅಟ್ಟಹಾಸದಿಂದ ಹೋಗುತ್ತಿರುವರು !

ಅಂದಮೇಲೆ ನಾನು ಹಾಗೆ ಮಾಡದಿದ್ದರೆ ನನ್ನ ತಾರುಣ್ಯವೆಲ್ಲವೂ ವ್ಯರ್ಥವಾಗಿ ಹೋಗುವದಲ್ಲವೆ ? ಕಾರಣ ನಾನಾದರೂ ಅವರಂತೆಯೇ ಲೋಕಸುಂದರಿಯನ್ನು ಸಂಪಾದಿಸಿಕೊಳ್ಳಲು ಈ ಆಭರಣಗಳನ್ನು ತೆಗೆದುಕೊಂಡು ಅವಳ ಗೃಹಕ್ಕೆ ಹೋಗುವೆನು.

( ಹೇಮರಡ್ಡಿ ಪ್ರವೇಶ )

**ಹೇಮರಡ್ಡಿ—** ಮಗು ವೇಮರಡ್ಡಿ, ಯಾವ ಲೋಕಸುಂದರಿಯೋ ? ಯಾವ ವೇಶ್ಯಳೋ ? ಎಲ್ಲಿ ಹೋಗುವಿ ? ಮನೆಯಲ್ಲಿ ಏನು ಮಾಡಿ ಬಂದಿರುವೆ ? ಚಿಕ್ಕವಳಾದ ಬಸಮ್ಮನನ್ನು ಮರೆತು ಬಿಟ್ಟಿಯೋ ? ಹೋಗಬೇಡ ನಿಲ್ಲು ನಿಲ್ಲು. ಒಂದು ಮಾತನಾಡು.

**ವೇಮ—** ಓಹೋ ! ಈತನ ಮುಂದೆ ಹೇಳಿದವರು ಯಾರಿರಬಹುದು ? ಆ ದುಷ್ಟಳಾದ ನನ್ನ ಹೆಂಡತಿಯೇ ಹೇಳಿರಬಹುದು ! ಹೇಳಿದರೂ ಹೇಳಲಿ ನಾನು ಹೆದರುವೆನೇ ? ಈ ಮುದಕನು ನನ್ನನ್ನು ಏನು ಮಾಡುವನು ? ತಂದೆಯೇ ಈಗ ಮಾತ್ರ ಸುಮ್ಮನೇ ಹೋಗು. ನಾನು ಲೋಕಸುಂದರಿಯೆಂಬ ವೇಶ್ಯಯ ಗೃಹಕ್ಕೆ ಹೋಗುವೆನು. ಅದಕ್ಕಾಗಿ ಮನೆಯಲ್ಲಿದ್ದ ಆಭರಣಗಳನ್ನೆಲ್ಲಾ ತಂದಿರುವೆನು. ಈಗ ನೀನು ಅಡ್ಡಬಂದರೆ ನಿನಗೆ ಮರ್ಯಾದೆ ಬರಲಾರದು.

**ಹೇಮರಡ್ಡಿ—** ಮಗುವೆ ! ಪರಸ್ತ್ರೀ ಸಹವಾಸವನ್ನು ಮಾಡಿದ ಮನುಷ್ಯನಿಗೆ ರೌರವ ನರಕವು ಪ್ರಾಪ್ತವಾಗುವದೆಂದು 'ಪರದಾರಾನ್ನಗಚ್ಛೇತ್' ಎಂಬ ವೇದ ವಾಕ್ಯವು ಕೈಯೆತ್ತಿ ಸಾರುತ್ತದೆ ! ವಿಚಾರಮಾಡು. ಹೋಗಬೇಡ ಕೈಮುಗಿದು ಹೇಳುವೆನು !

**ವೇಮ—** ಇಂಥ ಜಡಬುದ್ಧಿಗಳೆಲ್ಲಾ ವಿಚಾರಹೀನರೇ ಇರುವರು ! ಸಕಲ ಮನುಷ್ಯರ ದೇಹಗಳಲ್ಲಿ ಕರಚರಣಗಳು ಒಂದೇ ಇರುವವು. ಹೀಗಿದ್ದು ಪರಸ್ತ್ರೀ ಸ್ವಸ್ತ್ರೀಯೆಂದು ಭೇದ ಮಾಡುವ ಮಿಥ್ಯವಾದ ಧರ್ಮ ಶಾಸ್ತ್ರವನ್ನು ನಂಬಿ, ಬ್ರಹ್ಮಾನಂದ ರೂಪವಾದ ವೇಶ್ಯಾಸ್ತ್ರೀಯರ ಸುಖಕ್ಕೆ ಬಹಿರ್ಭೂತರಾದ ಇಂಥ ಜಡಮತಿಗಳ ಜನ್ಮಕ್ಕೆ ಧಿಃಕಾರ ! ಧಿಃಕಾರ !!

ಹೇಮರಡ್ಡಿ—

ಪದ್ಯ :— ಸೂಳೆ ಮುಪ್ಪಾಗಿ ಜೋಗವ್ವನಾಗುವಳು! ಗೋಪಾಳ
ಪುಟ್ಟಿಯು ಬರುವದು ನಿನ್ನ ಕೈಗೆ ಬಹುದಿನ್ನಲ್ಪಕಾಲದೊಳು |
ನಿಜವೆಂದು ನಂಬು ಗಂಟಿಲ್ಲ ಕಳಕೊಂಡು ತಿಳಿವುದು
ಜಾಣ್ಮೆಯು | ಪೇಳುವೆನ್ನಯ ಮಾತದು | ಮೇಲಾದ ಬೋಧೆ
ಯನು | ಕೇಳಲದಕ್ಕೊಡಂಬಡದೆ ಪೋಗೆ | ಕೇಡದು
ಬರ್ಪುದು ‖ ೧ ‖

ವೇಮರಡ್ಡಿ, ಕಷ್ಟಕಾಲದಲ್ಲಿ ಸೂಳೆಯು ನಿನ್ನನ್ನು ನೋಡುವಳೇ? ಮರಣಕಾಲದಲ್ಲಿ ಸ್ಮಶಾನಕ್ಕೆ ಬಂದು ಹೆಂಡತಿಯಂತೆ ಬೆಳೆಗಳನ್ನೊಡೆಯುವಳೇ? ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ಸೂಳೆಯ ಮಕ್ಕಳೇನಾದರೂ ವಂಶಿಕರಾಗ ಬಲ್ಲರೇ? ಮಗುವೇ ಸೂಳೆಯ ಮನೆಗೆ ಹೋಗುವವರಿಗೆ ಅರ್ಥಹಾನಿ, ಮಾನಹಾನಿ, ಪ್ರಾಣಹಾನಿಗಳು ತಪ್ಪವು! ಎಂದಿಗೂ ತಪ್ಪವು!! ಸೂಳೆಯು ಹಣವಿರುವವರೆಗೂ ಪ್ರೀತಿಸುವಳು. ಹಣವು ತೀರಿದ ಬಳಿಕ ನಿನ್ನನ್ನು ಹೆಣವೆಂದು ಕಾಲಿಲೆ ಒದೆಯುವಳು! ಸೂಳೆಯರ ದೂಷಿತವಾದ ರಕ್ತ ಸಂಬಂಧದಿಂದ ನಿನ್ನ ದೇಹದಲ್ಲಿಯ ಶುದ್ಧವಾದ ರಕ್ತವೆಲ್ಲವು ಕೆಟ್ಟು ಹಾಳಾಗಿ ಹೋಗುವದು! ಆದ್ದರಿಂದ ಶರೀರವು ಮುಪ್ಪಾಗಿ ಅನೇಕ ವಿಪತ್ತುಗಳಿಗೆ ತುತ್ತಾಗುವದು. ಮಗುವೇ ಬೇಡಾ, ಸೂಳೆಯ ಮನೆಗೆ ಹೋಗಬೇಡ! ಕಾಲಿಗೆ ಬೀಳೆಂವರೆ ಬೀಳುವೆನು. ತಾ ಆಭರಣಗಳನ್ನು ತಾ. ಮನೆಯಲ್ಲಿ ನಿನ್ನನ್ನು ಹಡೆದವಳು ಬಹಳವಾಗಿ ಗೋಳಾಡುತ್ತಿರುವಳು.

ವೇಮ— ಎಲೋ ಮೂಢನೇ. ಅಧ್ವರದಲ್ಲಿ ಪಶುಹಿಂಸೆಯನ್ನು ಮಾಡಿದರೆ ಸ್ವರ್ಗವೇ ಪ್ರಾಪ್ತವಾಗುವದೆಂದು ಹೇಳುವರು. ಅಂದಮೇಲೆ ನಿನ್ನ ಶಿರಸ್ಸನ್ನು ಕಡಿದು ಅಗ್ನಿಗೆ ಆಹುತಿಕೊಟ್ಟರೆ ನಿನಗಾದರೂ ಸ್ವರ್ಗವೇ ಲಭಿಸುವದು! ಹಾಗೆ ಮಾಡಬೇಕೋ ಸುಮ್ಮನೇ ದಾರೀ ಬಿಡುವೆಯೋ?

ಹೇಮರಡ್ಡಿ-- ಮಗುವೇ, ಮಾಡಿದರೂ ಮಾಡು. ಸೂಳೆಯ ಮನೆಗೆ ಮಾತ್ರ ಹೋಗಬೇಡ! ನಿನ್ನ ಹೆಂಡತಿಯಾದ ಬಸಮ್ಮನಿಗಿಂತಲೂ ಲೋಕಸುಂದರಿಯು ರೂಪವತಿಯಾಗಿರುವಳೇ? ನೀನು ವ್ಯವಸಾಯಕ್ಕು ಕೂಡ ಹೋಗಬೇಡ. ಮನೆಯಲ್ಲಿ ಸುಖವಾಗಿರು. ತಾ ಆಭರಣಗಳನ್ನು ತಾ.

ವೇಮ— ಈ ಮದುಕನು ಒಡೆವೆಗಳ ಆಶೆಗಾಗಿ ಏನೇನೋ ಒದರುತ್ತಿರುವನು. ಇವನ ಹಾಳಹರಟೆಯನ್ನು ಕೇಳುತ್ತ ನಿಂತರೆ ವೇಳೆಯಾಗುವದು. ಆದ್ದರಿಂದ ಇವನನ್ನು ಆಕಡೆಗೆ ತಳ್ಳಿ ಹೋಗುವೆನು. ಏಲೋ ವೃದ್ಧನೇ ಸುಮ್ಮನೆ ದಾರಿಯನ್ನು ಬಿಡುವೆಯಾ ಕತ್ತುಹಿಡಿದ. ಆ ಕಡೆಗೆ ತಳ್ಳಿಬಿಡಲೋ?

ಹೇಮರಡ್ಡಿ— ನೀನು ಕತ್ತನ್ನು ಹಿಡಿದು ತಳ್ಳುವದು ಹಾಗಿರಲಿ, ನನ್ನ ಕುತ್ತಿಗೆಯನ್ನು ಹಿಚುಕಿದರೂ ನಿನ್ನನ್ನು ಬಿಡುವದಿಲ್ಲಾ. ತಾ ಆಭರಣಗಳನ್ನು ತಾ.

ವೇಮ— ಇವನು ಲೋಭತನದಿಂದ ಧನಸಂಪಾದನೆಯನ್ನು ಮಾಡಿಕೊಂಡಿರುವನು. ಇಂಥವನಿಗೆ ನಾಗರೀಕತ್ವವು ಹೇಗೆ ಬರುವದು? ಸುಳ್ಳು, ಸುಳ್ಳು, ಇವನು ಬಾಯಿಮಾತಿನಿಂದ ಹೇಳಿದರೆ ಕೇಳಲಾರನು. ಕಾಲಿನಿಂದ ಒದ್ದು ಆ ಕಡೆಗೆ ಹೋಗುವೆನು! ಎಲೋ ವೃದ್ಧನೇ ಕಾಲಿನಿಂದ ಒದೆಯಲೋ ಸುಮ್ಮನೆ ದಾರಿಯನ್ನು ಬಿಡುವೆಯೋ?

ಹೇಮರಡ್ಡಿ— ಅಹಹಹ! ನಿನ್ನಂಥ ಮಗನು ಜಗತ್ತಿನಲ್ಲಿ ಇರುವದುಂಟೇ? ಒದೆಯುವೆಯಾ? ಅಪ್ಪಾ ಒದೆಯುವೆಯಾ? ಒದ್ದರೂ ಚಿಂತೆಯಿಲ್ಲ. ಸೂಳೆಯ ಮನೆಗೆ ಮಾತ್ರ ಹೋಗಬೇಡ!

( ನಂಬರ ೪೮ ) ಪದ ರಾಗ – ಥೈಲಾಗು ತಾ– ಮಲ್ಹಾರಯುಕ್ತಾ

ವೇಮ— ದುಷ್ಟಾ ದುಷ್ಟಾ ಕಡುದುರುಳಾ ಕುಲಘಾತಕ ಕಡದಿಡುವೆನು.
ಕಡುದುಷ್ಟಾ ವಿರೋಧಿ | ಮುರದಿಡುವೆನು ಶಿರವಾ ||೧||

( ಒದ್ದು ಓಡಿ ಹೋಗುವನು )



ವೇಷು — ಎಲೋ ವೃದ್ಧನೇ, ಕಾಲಿನಿಂದ ಒಡೆಯಲೋ ಸುಮ್ಮನೆ
ದಾರಿಯನ್ನು ಬಿಡುವೆಯೋ?

( ನಂಬರ ೪೯ ) ಪದ ರಾಗ - ತೋಡಿ ತಾಲ - ಯಕ್ಕಾ

**ಹೇಮ—** ಬಾಲಾ ಯನ್ನಾ। ಒದೆದು ಹೀನ। ವೇಶ್ಯಾಗೃಹಕೆ
ಪೋದೆಯೋ ನೀ! ಪ್ರೇಮದಿಂದ। ಪೇಳ್ದಿ
ನಾನು। ಕಾಮರೂಪನೆ ॥೧॥

ಅಯ್ಯೋ! ಮಕ್ಕಳೆಂಬ ಅಭಿಲಾಷೆಯು ಇಂದಿಗೆ ನಾಶವಾಯಿತು. ಈ ಸಂಸಾರ ಭ್ರಾಂತಿಯನ್ನು ನಾನು ನಿಶ್ಚಯವಾಗಿ ಬಿಟ್ಟೆನು. ಮಗು ವೇಮರಡ್ಡಿ, ಏನಾದೆ? ಸೂಳೆಯ ಮನೆಗೆ ಹೋದೆಯಾ! ನಿಮ್ಮ ತಂದೆಯನ್ನು ಕಾಲಿನಿಂದ ಒದ್ದೆಯಾ!! ಶಿವಶಿವಾ, ನನ್ನ ಮನೆ ತನವೇನಾಯಿತು? ಹಾಳಾಯಿತು! ಶಿವಶರಣೆಯಾದ ಮಲ್ಲಮ್ಮನು ಮನೆಯನ್ನು ಬಿಟ್ಟು ಹೋದಂದಿನಿಂದ ನಡೆಯಬಾರದ ಕೃತ್ಯಗಳೇ ನಡೆಯುತ್ತಿರುವವು. ತಾಯೀ ಮಲ್ಲವ್ವಾ, ನನ್ನ ಸಕಲೈಶ್ವರ್ಯವನ್ನು ತೆಗೆದುಕೊಂಡು ಅರಣ್ಯವನ್ನು ಸೇರಿದೆಯಾ!

(ನಂಬರ ೫೦) ಪದ ರಾಗ–ದೇಶಿ ತಾಲ–ದಾದರಾ

**ಹೇಮ—** ಸುಖವಿಲ್ಲವೋ। ಜನ್ಮ ಸಾಕಿನ್ನು। ಬೇಡುವೆ॥
ಲೋಕಾಧಿನಾಥ। ಘನಮೋಕ್ಷದಾತ॥
ವೃದ್ಧಕಾಲದೋಳ್ ಪುತ್ರರ ಸುಖವು ಯನಗಿಲ್ಲವು।
ಗುಣಹಾರ। ಆದರಿಂದ ತವಪಾದವ ತೋರಿಸು।
ಪಾಲಿಸು। ಶ್ರೀಪತಿನಾಥ ॥೧॥ (ಹೋಗುವನು)

( ಕಳ್ಳರ ಪ್ರವೇಶ )

( ಪಿಚ್ಚಾ ಮತ್ತು ಕರೇಯಲ್ಲಗ )

**ಪಿಚ್ಚ—** ಕರೇಯಲ್ಲಗ, ಮೊನ್ನೆ ನಾವು ಆ ದುರ್ಗವ್ವನ ಗುಡಿಯೊಳಗೆ ಹೊಕ್ಕು ಅನೇಕ ಆಭರಣಗಳನ್ನು ತಂದಿವಿ. ಅಲ್ಲಿಂದ ಇತ್ತೀಚಿಗೆ ಕನ್ನ ಹೊಡಿಯಲಿಕ್ಕೆ ಮನಿಗಳೇ ಸಿಗವಲ್ಲವಲ್ಲಾ?

**ಕರೇಯಲ್ಲಗ—** ಪಿಚ್ಚಣ್ಣಾ, ಈ ಸಿದ್ದಾಪುರದ ಹೇಮರಡ್ಡಿಯ ಮನೆಯು ಬಹಳ ಅನುಕೂಲವಾಗಿರುವದು. ಏಕಂದರೆ ವೇಮರಡ್ಡಿಯೆಂಬ ವನು ಸೂಳೆಯಾದ ಲೋಕಸುಂದರಿಯ ಮನೆಯನ್ನು ಸೇರಿರುವನು.

ಭರಮರಡ್ಡಿಯೆಂಬವನು ಹೆಂಡತಿಯ ವ್ಯಸನದಿಂದ ಅಡವಿ ತಿರುಗು. ತ್ತಿರುವನು. ಹೇಮರಡ್ಡಿಯಾದರೂ ಮಲ್ಲಮ್ಮನ ವ್ಯಸನದಿಂದ ದನ. ಕಟ್ಟುವ ಮನೆಯಲ್ಲಿ ಇರುವನು. ವಾಸಮಾಡಿಕೊಂಡಿರುವ ಮನೆ ಯಲ್ಲಿ ಮಾತ್ರ ಉಳಿದಾದ ಹೆಂಗಸರೇ ಇರುವರು. ಕಾರಣ ನಾವು ಅಲ್ಲಿಗೆ ಹೋದರೆ ನಮ್ಮ ಕೆಲಸವು ಆಗುವದು. ಜಾಗ್ರತೆಯಾಗಿ. ಹೇಮರಡ್ಡಿಯ ಮನೆಗೆ ಕನ್ನಹಾಕುವ ನಡಿ.

ಪಿಚ್ಚ— ಹೌದು ಹೋಗುವ ನಡಿ. ( ಹೋಗುವರು ).

( ಮನೆಯಲ್ಲಿ ಎಲ್ಲರೂ ಮಲಗಿರುವರು. ಕಳ್ಳರ ಪ್ರವೇಶ )

ಕರೇಯಲ್ಲಗ— ಪಿಚ್ಚಣ್ಣಾ, ಇದು ಒಳ್ಳೇ ಸಮಯ; ಎಲ್ಲರೂ ನಿದ್ರಿಸುತ್ತಿ. ರುವರು. ನಾನು ಒಳಗೆ ಹೋಗಿ ಕೈಗೆ ಸಿಕ್ಕದ್ದನ್ನೆಲ್ಲಾ ತೆಗೆದು ಕೊಂಡು ಬರುತ್ತೇನೆ. ನೀನು ಇಲ್ಲೇ ಇರು. ( ಒಳಗೆ ಹೋಗಿ ಬಂದು ) ಪಿಚ್ಚಾ, ನಮ್ಮ ಕೆಲಸವಾಯಿತು. ಇನ್ನು ಜಾಗ್ರತೆಯಾಗಿ ಹೋಗುವಾ. (ಹೋಗುವರು ).

ಪದ್ಮಮ್ಮ— (ಎದ್ದು) ನಾಗಮ್ಮ, ಲಿಂಗಮ್ಮ, ಬಸಮ್ಮ ಏಳಿರಿ ಬೆಳಗಾ ಗುತ್ತ ಬಂದಿತು. ಮನೆಯ ಕೆಲಸಕ್ಕೆ ಹೊತ್ತಾಗುವದಿಲ್ಲವೇ?

ನಾಗಮ್ಮ— ಅತ್ತಿಯವರೇ, ಈಗ ನನಗೊಂದು ಸ್ವಪ್ನವಾಯಿತು. ಯಾರೋ ಈರ್ವರು ಬಂದು ನಮ್ಮ ಮನೆಯನ್ನು ನುಗ್ಗಿದಂತೆ ಕಂಡೆನು.

ಲಿಂಗಮ್ಮ— ಅಕ್ಕಾ, ನಿನ್ನ ಕನಸಿನ ಸುದ್ದಿ 'ಹಾಗಿರಲಿ. ಅಗೋ ಅಲ್ಲಿ ನೋಡು, ಗೋಡೆಯ ಒಳಗೆ ಕಿಂಡಿ ಬಿದ್ದಂತೆ ಕಾಣುವದು! ಅತ್ತಿಯ ವರೇ, ಇಗೋ ಕಳ್ಳರು ಬಂದು ಕನ್ನವನ್ನು ಹೊಡೆದಿರುವರು!

ಪದ್ಮಮ್ಮ— ಏನು? ಕನ್ನವನ್ನು ಹೊಡೆದಿರುವರೇ? ಎಲ್ಲಿ ಲಿಂಗಮ್ಮ ದೀಪವನ್ನು ಹಿಡಿದುಕೊಂಡು ನೋಡು. ಸಾಮಾನು ಏನೇನು ಹೋಗಿ ರುವವು. ( ಲಿಂಗಮ್ಮ ದೀಪ ಹಿಡಿದು ನೋಡುವಳು. ದೀಪದಿಂದ ಮನೆಗೆ ಬೆಂಕಿ ಹತ್ತುವದು. )

ನಾಗಮ್ಮ— ತಂಗೀ! ನಿನ್ನ ಕೈಯೊಳಗಿನ ದೀಪದಿಂದ ನಾರಿನ ಗುಂಜಿಗೆ ಬೆಂಕಿಹತ್ತಿ ಮನೆಯನ್ನೆಲ್ಲಾ ಸುಡುತ್ತಾ ಬರುತ್ತಿರುವದು! ಅತ್ತಿಯವರೇ, ಮನೆಗೆ ಬೆಂಕಿ ಹತ್ತಿತು! (ಎಂದು ಸರ್ವರೂ ರೋದನ ಮಾಡುವರು)

ನಾಗಮ್ಮ— ಯನ್ನಾಸೋದರಮಾವ | ನುಡಸಿದ್ದನಾ ಕರಸೀ |
ಸಾಸಿಬಣ್ಣದ ಶೀರೆಯನ್ನು ||

ಲಿಂಗಮ್ಮ— ಮುನ್ನಾತೊಟ್ಟಲಿಗಕ್ಕಾ । ನೊಲಿದು ಹಾಕಿದ್ದೆನಾ
ಹೊನ್ನಾ ಹೂವಿನ ಕುಪ್ಪಸವನೂ ||

ಪದ್ಮಮ್ಮ— ಇನ್ನೇನು ಮಾಡುವದೀಗಲೆ ನಾವ್ ನೀವ್ |
ಬಾಯಾಬಡಿಕೊಳ್ಳುವದಾಯ್ತು || ಮೊನ್ನೆ ಹೊಲಿಸಿರ್ದೆನಾ |
ಬಣ್ಣದ ಕೌದಿಯಾ | ನಿನ್ನೆ ಕಳಿಸಿರ್ದರಾ ತೌರವರು
ಹಚ್ಚಡವಾ ||

ಶಿವಶಿವಾ! ಒಂದಕ್ಕಿಂತಲೂ ಒಂದು ಅಧಿಕವಾದ ಕಷ್ಟವೇ ಪ್ರಾಪ್ತವಾಗುತ್ತಿರುವದಲ್ಲಾ! ಭರಮರಡ್ಡೀ ಮನೆಗೆ ಬೆಂಕಿಹತ್ತಿರುವದು. ಒಳಗಿನ ಸಾಮಾನು ತೆಗೆದುಕೊಂಡು ಬಾ!

(ಹೇಮರಡ್ಡಿಯ ಪ್ರವೇಶ)

ಹೇಮ— ಇದೇನು? ಮನೆಯಲ್ಲಿ ಸರ್ವರೂ ರೋದನಮಾಡುವಂತೆ ತೋರುತ್ತದೆ. ಮಗು ಭರಮರಡ್ಡಿ ಏನಾಗಿರುವದು?

ಭರಮರಡ್ಡಿ— ಯಪ್ಪಲೇ! ಬೆಂಕಿಗೆ ಮನಿ ಹತ್ತೈತೋ!

ಹೇಮರಡ್ಡಿ— ಎಲೋ ಹುಚ್ಚ, ಬೆಂಕಿಗೆ ಮನೆ ಹತ್ತೋದುಂಟೇನೋ?

ಭರಮರಡ್ಡಿ— ಸುಳ್ಳು ಹೇಳ್ತೇನೇನು ನೋಡಬಾರ್ಲೇ ಹುಡುಗಾ!

(ಒಳಗೆಹೋಗಿ ನೋಡಿ ಬಂದು)

ಹೇಮರಡ್ಡಿ— ಎಲೇ ಪಾಪಿ ಹೆಂಗಸರೇ, ಮಹಪ್ಪವನ್ನು ತಿಳಿಯದೆ ಮಲ್ಲವ್ವನನ್ನು ಕಾಡಿಗೆ ದಬ್ಬಿ ನನ್ನ ಮನೆಗೆ ಬೆಂಕಿ ಹಚ್ಚಿದಿರಾ? ಬಸಮ್ಮ ಮನೆಗೆ ಬೆಂಕಿ ಹತ್ತಿದ ಸುದ್ದಿಯನ್ನು ನೀನು ನನಗೇತಕ್ಕೆ ಹೇಳಲಿಲ್ಲ?

ಬಸಮ್ಮ— ಮಾವ, ನಾನು ನಿಮ್ಮಲ್ಲಿಗೆ ಬರುವಕಾಲಕ್ಕೆ ಏನೂ ಇದ್ದಿಲ್ಲ. ಅತ್ತಿಯವರನ್ನಾದರೂ ಕೇಳಿರಿ.

ಹೇಮ— ಈ ನೀಚವೃದ್ಧಳನ್ನು ಕೇಳಬೇಕೇ? ಎಲೇ ಏನು ಘಾತ ಮಾಡಿದಿ? ನೀವೆಲ್ಲರೂ ಸೇರಿ ಶಿವಶರಣಿಯಾದ ಮಲ್ಲಮ್ಮನನ್ನು ಅನ್ಯಾಯವಾಗಿ ಅರಣ್ಯಕ್ಕೆ ಕಳುಹಿಸಿದಿರಿ! ಇಲ್ಲದಿದ್ದರೆ ನಿಮ್ಮ ಸಂಪತ್ತು ಹಾಳಾಗುವದಕ್ಕೆ ಕಾರಣವೇನು? ಅದನ್ನಾದರೂ ಹೇಳಿರಿ.

(ನಂಬರ ೫೧) ಪದ ರಾಗ–ಭೈರವಿ ತಾಲ–ತ್ರಿತಾಲ

ಪದ್ಮಮ್ಮ— ಪತಿದೇವ ತವಪಾದ। ನಮಿಸುತಲಿಹ| ಪೇಳ್ವೆನಾಯತಿಯು
ಶರ್ವಲಾಂಛನ| ಧರಿಸುತ ಬಂದು। ಭಿಕ್ಷೆಯಪಡಿಯದೆ
ನೊಂದು ಶಾಪವನಿತ್ತನು ||೧||

ಈಗ ಸ್ವಲ್ಪ ದಿವಸಗಳ ಹಿಂದೆ ಒಬ್ಬ ತಾಪಸಿಯು ಕ್ಷುದ್ಬಾಧೆಯಿಂದ ನಮ್ಮ ಮನೆಗೆ ಬಂದು ಭಿಕ್ಷೆಯನ್ನು ಬೇಡಲು, ನಾವು ಆತನನ್ನು ನಿಂದಿಸಿ ಮನೆಯಿಂದ ಹೊರಗೆ ಹಾಕಲು,ನಿಮ್ಮ ಐಶ್ವರ್ಯವೆಲ್ಲ ಅಗ್ನಿಗೆ ಆಹುತಿಯಾಗಲೆಂದು ಶಾಪವನ್ನು ಕೊಟ್ಟು ಹೋದನು.

ಹೇಮ— ಎಲೇ ಪಾತಕರಂಡೇ, ಆ ತಾಪಸನೆಂದರೆ ಯಾರೆಂದು ತಿಳದಿರುವಿರಿ? ಆ ನಮ್ಮ ಶಿವಶರಣಿಯಾದ ಮಲ್ಲಮ್ಮನ ಪ್ರಭುವು! ಆತನೇ ಮಲ್ಲಯ್ಯನೆಂಬ ಹೆಸರಿನ ಪರಮಾತ್ಮನು! ಸತ್ಯವಂತಿಯಾದ ಮಲ್ಲಮ್ಮನಿಗೆ ನೀವು ದೋಷವನ್ನು ಹೊರಿಸಿದ್ದರಿಂದ ನಿಮ್ಮನ್ನು ಪರೀಕ್ಷೆ ಮಾಡಬೇಕೆಂದು ಬಂದಿದ್ದನು.

ಪದ್ಮಮ್ಮ— ನೀವು ಪ್ರಥಮದಲ್ಲಿಯೇ ತಿಳುಹಿಸಿದ್ದರೆ ನಾನು ಈ ನೀಚ ಸೊಸಿಯರ ಮಾತಿಗೆ ಕಿವಿಗೊಟ್ಟು, ನಮ್ಮ ಮನೆಯ ಸೌಭಾಗ್ಯ ಲಕ್ಷ್ಮಿಯನ್ನು ಕಾಡಿಗೆ ಕಳುಹಿಸುತ್ತಿದ್ದಿಲ್ಲ. ಆ ಶರಣೆಯು ಹೋದಂದಿನಿಂದ ಕಷ್ಟವೇ ಕಷ್ಟ! ಒಬ್ಬ ಮಗನು ಸೂಳೆಯ ಮನೆಯನ್ನು ಸೇರಿದನು! ಇನ್ನೊಬ್ಬ ಮಗನು ಹುಚ್ಚನಂತೆ ತಿರುಗುತ್ತಿರುವನು! ಆಭರಣಗಳೆಲ್ಲ ಕಳ್ಳರ ಪಾಲಾದವು! ಭೂಮಿಗಳು ಸಹಿತ ಬೆಳೆಯದೆ ಬೀಳು ಬಿದ್ದವು! ನನ್ನ ಅಪರಾಧವನ್ನು ಕ್ಷಮಿಸಿ ಮುಂದಿನ ಕರ್ತವ್ಯವನ್ನು ತಿಳುಹಿಸಬೇಕೆಂದು ಬೇಡಿಕೊಳ್ಳುವೆನು.

ಹೇಮ— ಪ್ರಿಯೇ ಚಿಂತಿಸಿ ಪ್ರಯೋಜನವಿಲ್ಲ. ನಾವು ಆ ಶಿವಶರಣೆಯಾದ ಮಲ್ಲಮ್ಮನಲ್ಲಿಗೆ ಹೋಗಿ ಮೊರೆಬಿದ್ದರೆ, ನಮ್ಮ ತಪ್ಪನ್ನು ಮನ್ನಿಸುವಳು. ಆದ್ದರಿಂದ ಸರ್ವರೂ ಹೋಗಿ ಪೂಜ್ಯಳಾದ ಮಲ್ಲಮ್ಮನನ್ನು ಬೇಡಿಕೊಂಡು ಬರುವ ನಡೆಯಿರಿ. ( ಹೋಗುವರು )

(ಗುಡಿಸಲಿನಲ್ಲಿ ಮಲ್ಲವ್ವ ಶಯನಿಸಿರುವಳು. ಮಲ್ಲಿಕಾರ್ಜುನನ ಪ್ರವೇಶ)

(ನಂಬರ ೫೨) ಪದ ರಾಗ–ಸಾರಂಗ ತಾಲ-ಕೇರವ

ತರುಣಿ ಮಲ್ಲವ್ವ ತಾ | ಭರದಲಿ ಶಯನಿಸಿ ||
ಮರಗುತ ತಾನು ಕೊರಗುವಳು ಹಾ |
ವರಪ್ರಸಾದವ ಭರದಲಿ ಕಾಯ್ದಿಹಳ್ ||೧||

ನಾನು ಆ ದಿವಸ ಊಟ ಮಾಡದೆ ಹಾಗೆಯೇ ಹೋದದ್ದರಿಂದ ನನ್ನ ಭಕ್ತಳಾದ ಮಲ್ಲವ್ವನು ನಿನ್ನ ಪಾದಸಾಕ್ಷಿಯಾಗಿ ಊಟವನ್ನು ಮಾಡುವದಿಲ್ಲವೆಂದು ಕಠೋರವಾದ ಪ್ರತಿಜ್ಞೆಯನ್ನು ಮಾಡಿ,ನನ್ನನ್ನು ಕಾಯ್ದುಕೊಂಡು ನನ್ನ ಧ್ಯಾನವನ್ನು ಮಾಡುತ್ತ ಹಾಗೆಯೇ ಶಯನಿಸಿರುವಳಲ್ಲಾ ! ನಾನು ಈ ಅಂಬಲಿಯನ್ನು ಮಾತ್ರ ಊಟ ಮಾಡದೆ ಇದ್ದರೆ ತನ್ನ ಪ್ರಾಣವನ್ನು ನನ್ನ ಪಾದಕ್ಕೆ ಅರ್ಪಿಸಲು ಸಿದ್ಧಳಾಗಿರುವಳು ! ಕಾರಣ ಮಲ್ಲವ್ವನು ಏಳುವದರೊಳಗಾಗಿ ಈ ಮಹಾಪ್ರಸಾದವನ್ನು ಊಟಮಾಡಿ ಬಿಡುವೆನು.

(ಎಂದು ಉಣ್ಣುತ್ತಿರುವನು ಒಳಗೆ ರೋದನ ಧ್ವನಿಯಾಗುವದು)

ಅಹಾ ! ಹೇಮರಡ್ಡಿಗೆ ತಕ್ಕ ಪ್ರಾಯಶ್ಚಿತ್ತವಾಗಿರುವದರಿಂದ ತನ್ನ ಹೆಂಡತಿಯನ್ನೂ ಸೊಸಿಯರನ್ನೂ ಕರೆದುಕೊಂಡು ಮಲ್ಲವ್ವನ ದರ್ಶನಕ್ಕೆ ಬರುವಂತೆ ಭಾಸವಾಗುತ್ತಿರುವದು. ಅಸ್ತು. ಅಪರಾಧಿಗಳಾಗಿರುವ ತನ್ನ ಬಂಧುಗಳನ್ನು ತಿರಸ್ಕರಿಸುವಳೋ ಅಥವಾ ಪುರಸ್ಕರಿಸುವಳೋ ಮರೆಯಲ್ಲಿ ನಿಂತು ನೋಡುವೆನು. (ಮರೆಯಾಗುವನು)

ಮಲ್ಲಮ್ಮ— ಇದೇನು? ನಮ್ಮ ದನವಿನ ಹಟ್ಟಿಯ ಸಮೀಪದಲ್ಲಿ ಎಂದೂ ಇಲ್ಲದ ರೋದನ ಧ್ವನಿಯು ಕೇಳುತ್ತಿರುವದಲ್ಲಾ ? ಹೊರಗೆ

ಹೋಗಿ ನೋಡುವೆನು. ಅಹಾ! ನನ್ನ ಅತ್ತೆ-ಮಾವಂದಿರು ನನಗೆ ಆಶೀರ್ವಾದವನ್ನು ಮಾಡುವದಕ್ಕಾಗಿ ತಮ್ಮ ಸೊಸಿಯರನ್ನು ಕರೆದು ಕೊಂಡು ಇತ್ತ ಕಡೆಗೆ ಬರುವಂತೆ ಭಾಸವಾಗುವದು. ಆದ್ದರಿಂದ ನಾನೇ ಹೋಗಿ ಅವರನ್ನು ಕರೆದುಕೊಂಡು ಬರುವೆನು.

( ಹೋಗುವಷ್ಟರಲ್ಲಿ ಸರ್ವರೂ ಬರುವರು. ಅತ್ತಿ-ಮಾವಂದಿರ ಪಾದಕ್ಕೆ ಮಲ್ಲಮ್ಮನು ವಂದಿಸುವಳು )

ಪದ್ಮಮ್ಮ— ಅವ್ವಾ ಮಲ್ಲವ್ವಾ! ಏನೊಂದರಿಯದ ಮುಗ್ಧ ಬಾಲಿಕೆ ಯಾದ ನಿನಗೆ ಕಷ್ಟವನ್ನು ಕೊಟ್ಟ ಈ ನಿನ್ನ ಅತ್ತಿಯ ತಪ್ಪನ್ನು ಮನ್ನಿಸುವೆಯಾ?

ಮಲ್ಲಮ್ಮ— ಅತ್ತಿಯವರೇ, ದರಿದ್ರಳಾದ ನನಗೆ ಆಶೀರ್ವಾದವನ್ನು ಮಾಡುವದು ಬಿಟ್ಟು ಹೀಗೇಕೆ ಮಾತನಾಡುವಿರಿ?

ಹೇಮ— ಅವ್ವಾ ಮಲ್ಲವ್ವ, ಈಗ ಬಂದಿರುವ ಬಂಧುಗಳೆಲ್ಲರೂ ನಿನಗೆ ಅಪರಾಧವನ್ನು ಮಾಡಿದವರೇ ಇರುವರು. ಅಪರಾಧಿಗಳನ್ನು ಮನ್ನಿ ಸುವದು ನಿಮ್ಮಂಥ ಮಹಾತ್ಮರ ಕರ್ತವ್ಯವಲ್ಲದೆ ಬೇರೆಯಿಲ್ಲ.

ಪದ್ಮಮ್ಮ— ಅವ್ವಾ, ನೀನೇನು ಸಾಮಾನ್ಯಳೇ! ನೀನು ಮಹಾ ಶಿವಶರ ಣೆಯು! ನಿನ್ನ ಅಪಾರವಾದ ಮಹತ್ವವನ್ನರಿಯದೆ ನಿನಗೆ ಮಾಡ ಬಾರದ್ದನ್ನು ಮಾಡಿದೆವು; ಆಡಬಾರದ್ದನ್ನು ಆಡಿದೆವು. ನೀನು ಮನೆ ಯನ್ನು ಬಿಟ್ಟು ಬಂದಮೇಲೆ ಕಳ್ಳರು ಬಿದ್ದು ಸರ್ವ ಸಂಪತ್ತನ್ನು ಅಪ ಹರಿಸಿಕೊಂಡು ಹೋದರು. ಮೈದುನನಾದ ವೇಮರಡ್ಡಿಯು ಮನೆಯ ಬಂಗಾರವನ್ನೆಲ್ಲಾ ತೆಗೆದುಕೊಂಡು ಹೋಗಿ ಸೂಳೆಗೆ ಕೊಟ್ಟು ತಾನೂ ಕೂಡಾ ಅವಳ ಗೃಹದಲ್ಲಿಯೇ ಇರುವನು.

ನಾಗಮ್ಮ— ತಂಗೀ! ನೀನು ಬಂದ ಮೇಲೆ ಮನೆಯು ಬೆಂಕಿ ಹತ್ತಿ ಸುಟ್ಟು ಹೋಯಿತು.

ಲಿಂಗಮ್ಮ— ಅಕ್ಕಾ! ನೀನು ಬಂದನಂತರ ದನಕರುಗಳೆಲ್ಲಾ ಕಟ್ಟಿದ ಕಣ್ಣಿಯಲ್ಲೇ ಸತ್ತು ಹೋದವು.

ಭರಮು — ನನ್ನ ಗಾಳೀಪಟಾನೂ ಸುಟ್ಟು ಹೋಯಿತು!

ಮಲ್ಲಮ್ಮ— ಬಂಧುಗಳೇ, ನಾನೂ ನಿಮ್ಮಂತೆ ಮನುಷ್ಯಳು. ನನ್ನಿಂದೇ ನಾಗಬಲ್ಲದು? ಆ ಜಗದೀಶ್ವರನಾದ ಮಲ್ಲಿಕಾರ್ಜುನನನ್ನು ಧ್ಯಾನ ಮಾಡಿರಿ. ಸರ್ವರಿಗೂ ಸುಖವಾಗುವದು.

( ಸರ್ವರೂ ಸ್ತುತಿ ಮಾಡುವರು )

( ನಂಬರ ೫೩ ) ಪದ ರಾಗ – ಯಮುನಾ ತಾಲ – ಘೂಮಾಳಿ

ಸಾಮಜ ಹರವರ ಗುರು ಪರಮೇಶಾ। ವಿಧದಲಿ ನಿನ್ನ।
ಸ್ಮರಿಸುತಿರ್ಪೆವೈ। ಗುರುಚಂದಿರಧರ ಗಿರಿಜ ವಲ್ಲಭನೆ।
ಸ್ಮರಹರ ಗುರುತರ ಶ್ರೀ। ಧಾರುಣಿಯೊಳ್ ಗಮಿಸೈ ॥೧॥

ಮಲ್ಲಿಕಾರ್ಜುನ— ಹೇಮರಡ್ಡಿ ಮಲ್ಲವ್ವನೆಂದರೆ ಯಾರೆಂದು ತಿಳಿದು ಕೊಂಡಿರುವಿರಿ! ಕೇವಲ ಮಹಾಪತಿವ್ರತೆಯಾದ ಶಿವಶರಣೆ ಇರುವಳು. ಇಂಥಾ ಪತಿವ್ರತೆಗೆ ಈ ನಿನ್ನ ಹೆಂಡತಿ–ಸೊಸೆಯರು ವ್ಯಭಿಚಾರ ದೋಷವನ್ನು ಪರಿಗ್ರಹಿಸಿದ್ದರಿಂದ ನಿನ್ನ ಐಶ್ವರ್ಯವೆಲ್ಲ ನಾಶವಾಗಿ ಹೋಗಿರುವದು. ಮಲ್ಲವ್ವನ ಪಾದಪೂಜೆಯನ್ನು ಮಾಡಿದರೆ ಕೇವಲ ನನ್ನ ಪಾದಪೂಜೆಯನ್ನು ಮಾಡಿದಂತಾಗುವದು. ಮಲ್ಲವ್ವಾ! ಮಲ್ಲವ್ವಾ! ಎಂದು ಮಲ್ಲವ್ವನ ಭಜನೆ ಮಾಡಿದರೆ ಸಾಕ್ಷಾತ್ ನನ್ನ ಭಜನೆಯನ್ನು ಮಾಡಿದಂತಾಗುವದು. ಮಲ್ಲವ್ವನಿಂದ ಆಶೀರ್ವಾದ ಪಡೆದುಕೊಂಡರೆ ನನ್ನ ಆಶೀರ್ವಾದ ಪಡೆದಂತಾಗುವದು. ಕಾರಣ ಮಲ್ಲವ್ವನನ್ನು ಧ್ಯಾನಮಾಡುತ್ತ ನಿನ್ನ ಮನೆಗೆ ಕರೆದುಕೊಂಡು ಹೋದರೆ ನಿನ್ನ ಐಶ್ವರ್ಯವು ಮೊದಲಿನಂತೆಯೇ ಪ್ರಾಪ್ತವಾಗುವದು.

ಹೇಮು— ಬಂಧುಗಳೇ ಕೇಳಿದಿರಾ! ಪರಮಾತ್ಮನ ವಾಕ್ಯವನ್ನು ಕೇಳಿದಿರಾ! ಆತನ ವಾಕ್ಯದಂತೆ ಸರ್ವರೂ ಮಲ್ಲವ್ವನನ್ನು ಸ್ತುತಿಸಿ ನಮಸ್ಕರಿಸಿ ಮನೆಗೆ ಕರೆದುಕೊಂಡು ಹೋಗುವಾ ನಡೆಯಿರಿ.

( ಸ್ತುತಿಸುವರು )

(ನಂಬರ ೫೪) ಪದ ರಾಗ–ಬಿಹಾಗ ತಾಲ–ದಾದರಾ.

ದೇವಿ ಬೇಡ್ವೆ ಕರುಣಿಸೆಮ್ಮನು | ಪರಮಚರಿತೆ ಮಹಾ
ಕಾಂತೆ ನಾವ್ ಬೇಡುವೆ | ಅಪರಾಧವ | ಮನ್ನಿಸುವದು ನೀ ||೧||

ಮಲ್ಲಮ್ಮ— ದೇವಾ ಮಲ್ಲಿಕಾರ್ಜುನಾ! ನನಗೆಂಥ ಸಂಕಟವನ್ನು ತಂದ್ರಿ. ಇವರಿಂದ ಸ್ತುತಿಸುಕೊಳ್ಳುವದಕ್ಕೆ ನನ್ನನ್ನು ಯೋಗ್ಯಳನ್ನಾಗಿ ಮಾಡಿದೆಯಾ? ನಿನ್ನಾಜ್ಞೆಯಿಲ್ಲದೆ ನಾನು ಮುಂದಕ್ಕೆ ಹೆಜ್ಜೆಯನ್ನಿಡಲಾರೆ. ನೀನು ನನಗೆ ಯಾವ ಅಜ್ಞೆಯನ್ನು ಮಾಡುವಿ ಜಾಗ್ರತೆಯಾಗಿ ಹೇಳು!

ಮಲ್ಲಿಕಾರ್ಜುನ— ಅವ್ವಾ ಮಲ್ಲವ್ವಾ, ಭಯಪಡಬೇಡ! ಈ ನಿನ್ನೆ ಬಂಧುಗಳು ತಮ್ಮ ಪಾಪಕ್ಕೆ ತಕ್ಕ ಫಲವನ್ನು ಅನುಭವಿಸಿರುವರು- ನೀನು ನನ್ನ ಧ್ಯಾನಮಾಡಿದಾಕ್ಷಣವೇ ನಾನು ಬಂದು ನಿನ್ನ ಸಕಲ ಮನೋರಥಗಳನ್ನು ಪೂರ್ತಿಮಾಡುವೆನು. ನಿನ್ನ ಮಾವನ ಇಷ್ಟದಂತೆ ಮಂದಿರವನ್ನು ಪ್ರವೇಶಮಾಡು.

ಮಲ್ಲಮ್ಮ— ಅಹಹ! ಬಂಧುಗಳೇ, ನನ್ನ ತಂದೆಯ ಆಜ್ಞೆಯಾಯಿತು. ಇನ್ನು ಮಂದಿರಕ್ಕೆ ಹೋಗುವಾ ನಡೆಯಿರಿ. ( ಹೋಗುವರು )

ಹೇಮ— ತಾಯಿ ಮಲ್ಲವ್ವ, ಇದೇ ನನ್ನ ಸುಟ್ಟುಹೋದ ಮನೆಯು- ಇದನ್ನು ನಿನ್ನ ಪವಿತ್ರವಾದ ಚರಣ ಸ್ಪರ್ಶದಿಂದ ಉದ್ಧಾರಮಾಬೇಕೆಂದು ಬೇಡಿಕೊಳ್ಳುವೆನು.

ಮಲ್ಲಮ್ಮ— ದೇವಾ ಮಲ್ಲಿಕಾರ್ಜುನಾ! ಎಂಥ ಐಶ್ವರ್ಯವಿದ್ದದ್ದು ಏನಾಗಿರುವದು? ನಿನ್ನ ಕೋಪಮಾತ್ರಕ್ಕೆ ಸುಟ್ಟುಬೂದಿಯಾಗಿರುವದಲ್ಲವೇ! ಪರಮಾತ್ಮಾ, ಭಕ್ತೋದ್ಧಾರಕನೆಂಬುವ ನಿನ್ನ ನುಡಿಯು ನಿಜವಾದರೆ ಮೊದಲಿನಂತೆ ಸಕಲೈಶ್ವರ್ಯವನ್ನು ಅನುಗ್ರಹಿಸಿ ಈ ನಿನ್ನ ಭಕ್ತರನ್ನು ಉದ್ಧರಿಸು.

(ನಂಬರ ೫೫) ಪದ ರಾಗ-ಭೈರವಿ ತಾಲ—

ಶ್ರೀಭವ ವಾಸುದೇವ ಭೋ ಭೋ ಶಿವ ॥ ದೇವ ॥ಪಲ್ಲ॥
ಸನ್ಮಣಿಮಾಲ । ಶ್ರೀಲಗಿರಿವರ ಲೋಲ ಭಜಕಪಾಲ ।
ದೇವ ॥೧॥
ಮಂಗಲಾಂಗ ಭೋ ಮಂಗಲಪೂಗಂ
ಸಾಂಬದೇಹಿಮೆ ಶಂಭೋ ॥ ದೇವ ॥೨॥
ಕುಂಭಸಂಭ ವತಾಪಸವಂದಿತ ।
ಮಲ್ಲಿನಾಥ ಗುರುವರ ಭೋ ದೇವ ॥೩॥
ಚಿನ್ಮೂಲಯೋಗಿನ್ । ಸನ್ಮಾನ್ಯವಿರಾಗಿನ್ ।
ಸದಾ ಪ್ರಕಾಶಿನ್ । ಮಹಿಮನ್‌ಗರಿಮನ್ನಿರಾಗಿನ್ ॥
ದೇವ ॥೪॥

( ಜಯ್ ಮಲ್ಲಿಕಾರ್ಜುನ ಎಂದಾಕ್ಷಣವೇ ಮನೆಯು ಶೃಂಗಾರವಾಗುವದು )

**ಹೇಮರಡ್ಡಿ—** ಅಹಹಹ! ಮಲ್ಲವ್ವನ ಮಹತ್ವವನ್ನು ನೋಡಿದಿರಾ! ನನ್ನ ಭಾಗ್ಯದ ಲಕ್ಷ್ಮಿಯು ಮನೆಯಲ್ಲಿ ಬಂದು ಪಾದವನ್ನಿಟ್ಟಾಕ್ಷಣವೇ ಸಕಲ ಭಾಗ್ಯವು ಕ್ಷಣದಲ್ಲಿಯೇ ಒದಗಿತು. ಮಹಾತ್ಮಳೇ ನಿನ್ನ ಮಹಿಮೆಯು ನಮ್ಮಂಥ ಪಾಮರರಿಗೆ ಹೇಗೆ ತಿಳಿಯಬೇಕು ?

**ಮಲ್ಲಮ್ಮ—** ಮಾವನವರೇ, ಇದೆಲ್ಲ ಆ ಪರಮಾತ್ಮನ ಲೀಲೆಯಂತಲೇ ಭಾವಿಸಬೇಕು

**ಹೇಮ—** ಅವ್ವಾ, ಆ ಪರಮಾತ್ಮನ ಕರುಣಕ್ಕೆ ಪಾತ್ರಳಾದ ನಿನ್ನನ್ನು ಲೀಲಾಮೂರ್ತಿಯಂತಲೇ ತಿಳಿದ ಮನುಷ್ಯನಿಗೆ ಮಾತ್ರ ಸದ್ಗತಿಯೇ ಪ್ರಾಪ್ತವಾಗುವದು ತಾಯಿ.

**ವೇಮ—** ಅತ್ತಿಗೆಯವರೇ ನಿಮ್ಮ ಚರಣ ಸ್ಪರ್ಶದಿಂದ ಸುಟ್ಟುಹೋದ ಮನೆಯು ಶೃಂಗಾರವಾಯಿತು. ನಾನು ಮಹಾ ಪಾಪ ಕಾರ್ಯಗಳನ್ನು ಮಾಡಿ ಮನೆಯ ಸ್ವತ್ತನ್ನೆಲ್ಲಾ ಹಾಳು ಮಾಡಿದೆನು ಮುಂದೆ ನನಗೆ ಯಾವ ಆಜ್ಞೆಯನ್ನು ಮಾಡುವಿ ?

ಮಲ್ಲಮ್ಮ— ಮೈದುನರೇ " ಕೋಟಿ ಉದ್ಯೋಗದಲ್ಲಿ ಮೇಟಿ ಉದ್ಯೋಗವೇ ಅಧಿಕ " ವಾಗಿರುವದು. ಅಲ್ಲದೆ ನಾವು ಕೇವಲ ರಡ್ಡಿ ಒಕ್ಕಲಿಗರು. ಕಾರಣ ನಾವು ಕೃಷಿಕಾರ್ಯದಲ್ಲಿಯೇ ಕಾಲಹರಣ ಮಾಡಬೇಕು.

ಹೇಮ— ಅವ್ವಾ, ಈ ವೇಮರಡ್ಡಿಯು ಮನೆಯಲ್ಲಿದ್ದ ಎರಡು ಎತ್ತುಗಳನ್ನು ಮಾರಿ, ದಕ್ಷಿಣೋತ್ತರ ದಿಕ್ಕಿನ ಎಲ್ಲಾ ಭೂಮಿಗಳನು ಮಾರಿದನು. ಪೂರ್ವ ದಿಕ್ಕಿನ ಒಡ್ಡಿನ ಕಟ್ಟಹೊಲ ಮಾತ್ರ ಒಂದುಳಿದಿರುವದು ಅದೂ ಕೂಡಾ ಬಿತ್ತಲಿಕ್ಕೆ ಬೀಜವಿಲ್ಲದೆ ಬರಡಾಗಿ ನಿಂತಿರುವದು. ಈ ಕಷ್ಟವನ್ನು ಪರಿಹರಿಸಿ ನಮ್ಮನ್ನು ಉದ್ಧಾರ ಮಾಡಬೇಕೆಂದು ಬೇಡಿಕೊಳ್ಳುವೆನು.

ಮಲ್ಲಮ್ಮ— ಮಾವನವರೆ, ಈಗ ಚಿಂತಿಸಿ ಪ್ರಯೋಜನವಿಲ್ಲ. ಬಿತ್ತುವದಕ್ಕೆ ಬೀಜವೇತಕ್ಕೆ ಬೇಕು ? ಆ ನಮ್ಮ ಮನೆಯ ಅಂಗಳದಲ್ಲಿರುವ ಮಳಲಿಗೆ ನನ್ನ ತಂದೆಯ ಪ್ರಸಾದವನ್ನು ಹಾಕಿ ಬಿತ್ತುವೆನು. ನಡೆಯಿರಿ, ಸರ್ವರೂ ಹೋಗುವ.

( ಹೋಗಮರು. ಒಡ್ಡಿನ ಕಟ್ಟ ಹೊಲ. ಸರ್ವರ ಪ್ರವೇಶ )

ಹೇಮ— ತಾಯಿ ಮಲ್ಲವ್ವ, ಇದೇ ನನ್ನ ಒಡ್ಡಿನ ಕಟ್ಟ ಹೊಲ. ನೀನು ಮನೆಯಲ್ಲಿ ಇರುವವರೆಗೂ ಇದೊಂದು ಹೊಲದಲ್ಲಿ ನಾಲ್ಕೈದು ಖಂಡುಗ ಧಾನ್ಯವನ್ನು ಬೆಳೆಯುತ್ತಿದ್ದೆನು. ನೀನು ಮನೆಯನ್ನು ಬಿಟ್ಟು ಹೋದಾಕ್ಷಣವೇ ಇಂಥ ಹೊಲವು ಕೂಡಾ ಬರಡಾಗಿ ಹೋಯಿತು. ಈ ಕಷ್ಟವು ಮಹಾತ್ಮಳಾದ ನಿನ್ನಿಂದ ಪರಿಹಾರವಾಗಬೇಕೆಂದು ಬೇಡಿಕೊಳ್ಳುವೆನು.

ಮಲ್ಲಮ್ಮ— ದೇವಾ ಮಲ್ಲಿಕಾರ್ಜುನ ! ನಿನ್ನ ಮಹತ್ವವನ್ನು ನೋಡೇ ತೀರಬೇಕೆಂದು ಮುಷ್ಟಿಯಲ್ಲಿ ಮಳಲನ್ನು ಹಿಡಿದು, ಬಿತ್ತುವೆನು ಈ ಸಮಯವು ನಿನಗೆ ದೊರೆಯಲಾರದು. ನಿನ್ನ ಭಕ್ತಳ ಪ್ರತಿಜ್ಞೆಗೆ ಭಂಗ ತರಬೇಡ !

( ಕೂರಿಗೆಯ ಹತ್ತರಕ್ಕೆ ಬರುವಳು )

ಹೇಮ— ಭಾಗ್ಯಮರಡ್ಡಿ, ಮನೆಯಲ್ಲಿದ್ದ ಎರಡು ಎತ್ತುಗಳನ್ನು ಈ ನಿನ್ನ

ತಮ್ಮನು ಮಾರಿಬಿಟ್ಟನು. ಈಗ ನೀವಿಬ್ಬರು ಎತ್ತುಗಳಂತೆ ಈ ಕೂರಿಗೆಯನ್ನು ಎಳಿಯಬೇಕು ತಿಳಿಯಿತೋ ?

ಭರಮು – ಹೋಗಲೇ ಹೋಗು ! ಮನಿಹಾಳ್ಮಾಡವವ ದನಆಗೋನು. ನಾನೇನು? ಹೋಗು ಆಗುದಿಲ್ಲಹೋಗು !

ಹೇಮು— ಎಲೆ ಸುಮ್ಮನೆ ಬರುವಿಯೊ ಇಲ್ಲವೋ ನೋಡು.

( ಹೊಡಿಯುವದಕ್ಕೆ ಹೋಗುವನು )

ಭರಮು— ಬರ್ತೇನಿ ಬಿಡಲೇ ಯಪ್ಪಾ ! ಹೊಡಿಬ್ಯಾಡ

( ಹೇಮರಡ್ಡಿ ಭರಮರಡ್ಡಿ ಕೂರಿಗೆ ಎಳಿಯುವರು ಮಲ್ಲವ್ವ ಬಿತ್ತುವಳು )

ಪದ

( ನಂಬರ ೫೬ )

ಮಲ್ಲಮ್ಮ— ಬಿತ್ತುವೆನೀ ಭೂಮಿಯೊಳು | ಮಳಲನ್ನು ಮುದದಿಂದ |
ಮುತ್ತ್ಯೆದಿ ನಾನು ಧಾನ್ಯವ ಬೆಳಿಯಲು ||ಪಲ್ಲ||
ಮಲ್ಲಿನಾಥನೆ ನಿನ್ನ ಸಲ್ಲೀಲಪಾದವನು | ಧ್ಯಾನಿಸುತಲಿ
ಮಾನವ ಪೊರಿಯೈ ||೧||
ನೋಡಲು ಜನರೆಲ್ಲ | ಕೂಡಿ ಬಂದಿಹರಿಲ್ಲಿ |
ಬೇಡುವೆನವರಿಗೆ ಮಹಿಮೆಯ ತೋರೈ ||

( ಬಿತ್ತುವಳು ಜೋಳ ಬೆಳೆಯುವದು )

ಹೇಮು— ಅವ್ವಾ ಮಲ್ಲವ್ವಾ ! ನಿನ್ನ ಚರಿತ್ರೆಯು ಅಗಾಧವಾಗಿರುವದು! ನಿನ್ನನ್ನು ಪಲ್ಲಕ್ಕಿಯಮೇಲೆ ಕುಳ್ಳಿರಿಸಿ ಮೆರವಣಿಗೆಯನ್ನು ಮಾಡುತ್ತಾ ಮನೆಗೆಕರೆದುಕೊಂಡು ಹೋಗಬೇಕೆಂದು ನನ್ನ ಸಂಕಲ್ಪವಿದೆ. ಇದಕ್ಕೆ ಏನಪ್ಪಣೆಯನ್ನು ಕೊಡುವಿ ?

ಮಲ್ಲಮ್ಮ— ಮಾವನವರೇ, ನಿಮ್ಮ ಎದುರಿಗೆ ನಾನು ಪಲ್ಲಕ್ಕಿಯನ್ನೇರಿ ಯಾವ ಪಾಪಕ್ಕೆ ಹೋಗಲಿ ? ತಾವು ಹಾಗೆ ಭಾವಿಸಬಾರದು. ಪರಮಾತ್ಮನಾದ ಮಲ್ಲಿಕಾರ್ಜುನನನ್ನು ಧ್ಯಾನಮಾಡುತ್ತಾ ಸರ್ವರೂ ಮುಂದಿಕಕ್ಕೆ ಹೋಗುವ ನಡೆಯಿರಿ. ( ಹೋಗುವರು )

( ಕಾಳಿದಾಸನ ಪ್ರವೇಶ )

( ನಂಬರ ೫೭ ) ಪದ ರಾಗ ವಸಂತ ತ್ರಿತಾಲ

ಹರಿ ಧ್ಯಾನಮಾಡುತಲಿ ಪೋಗ್ವೆ | ಹರಿಪನುಭಕ್ತರ ಭವ
ಪಾಶವನು ತಿರುಪತಿಯಲಿ ತಾ | ತೋರ್ಪ ಲೀಲೆಯನು ||೧||

ಆಹಾ ! ನನ್ನ ಕುಲದೈವತವಾದ ತಿರುಪತಿ ವೆಂಕಟರಮಣನ ದರ್ಶನಕ್ಕೆ ಹೋಗಬೇಕೆಂದು ಬಂದರೆ ದಾರೀ ತಪ್ಪಿ ಘೋರಾರಣ್ಯವನ್ನು ಸೇರಿದೆನಲ್ಲಾ. ಅಲ್ಲಿ ಯಾವದೋ ಒಂದ ಶಿಖರವು ಕಂಡು ಬರುವದು. ಅದೇ ನಮ್ಮ ತಿರುಪತಿ ತಿಮ್ಮಪ್ಪನ ದೇವಾಲಯವು. ಜಾಗ್ರತೆಯಾಗಿ ಹೋಗುವೆನು. ( ಮುಂದಕ್ಕೆ ಬಂದು ಶಿಖರವನ್ನು ನೋಡಿ ) ಛೇ ಛೇ, ಇದು ತಿರುಪತಿ ದೇವಾಲಯುವಲ್ಲ. ಶ್ರೀಶೈಲದ ಮಲ್ಲಿಕಾರ್ಜುನನ ದೇವಾಲಯದ ಗೋಪುರವು. ಈ ಶಿಖರದ ದರ್ಶನದಿಂದಲೇ ದಾರಿ ತಪ್ಪಿರುವೆನು. ಏಕಂದರೆ ತಿರುಪತಿ ವೆಂಕಟರಮಣನ ದರ್ಶನಕ್ಕೆ ಹೋಗತಕ್ಕವರು ಶ್ರೀಶೈಲದ ಶಿಖರವನ್ನು ನೋಡಬಾರದೆಂದು ಹೇಳುವರು. ಕಾರಣ ಈ ಶಿಖರವು ಮರೆಯಾಗುವವರೆಗೂ ನನ್ನ ಎರಡೂ ಕಣ್ಣುಗಳನ್ನು ಮುಚ್ಚಿಕೊಂಡು ಪ್ರಯಾಣ ಮಾಡುವೆನು. ( ಕಣ್ಮುಚ್ಚಿಕೊಂಡು ಹೋಗುವನು) ಓಹೋ ಬಹುದೂರ ಬಂದೆನು. ಇನ್ನು ಆ ಶಿಖರವು ಮರೆಯಾಗಿರಬಹುದು. ಕಣ್ಣುಗಳನ್ನು ತೆರೆದು ನೋಡುವೆನು. ( ಕಣ್ಣು ತೆಗೆಯಲು ಹೋಗುವನು ಬಾರದೆ ಇದ್ದದರಿಂದ ) ಇದೇನು ? ನನ್ನ ನೇತ್ರಗಳೇ ಇಂಗಿದಂತೆ ಕಾಣುವವು. ನಿಶ್ಚಯವಾಗಿ ಕಣ್ಣುಗಳು ಹೋಗಿರುವವು, ದೇವಾ! ವೆಂಕಟರಮಣ! ನಿನ್ನ ದರ್ಶನಕ್ಕಾಗಿ ಬರುತ್ತಿರುವ ಭಕ್ತನ ಕಣ್ಣುಗಳನ್ನೇ ಇಲ್ಲದಂತೆ ಮಾಡಿದೆಯಾ? ಮುಂದೆ ನನ್ನ ಗತಿಯೇನು ?

**ವೆಂಕಟರಮಣ—** ಮೂರ್ಖಾ “ ದೇವಾನಾಮುಪ್ಯಹಂದೇವೋ | ಮಮದೇವೋ ಮಹೇಶ್ವರಃ ” ಎಂಬ ನನ್ನ ವಾಕ್ಯದಂತೆ ನಮ್ಮೆಲ್ಲರಿಗೂ ಪರಮ ಪೂಜ್ಯನಾದ ಪರಮೇಶ್ವರನೇ ಶ್ರೀಶೈಲದಲ್ಲ ವಾಸ

ಮಾಡಿರುವನು. ಅಂಥಾ ಶ್ರೀಶೈಲದ ಶಿಖರವನ್ನು ನೋಡಬಾರದೆಂಬ ನಿನ್ನ ಪಾಪದ ವಾಕ್ಯವೇ ನಿನ್ನ ಕಣ್ಣುಗಳನ್ನು ಕಳೆದಿರುವದು. ಎಲೋ "ಶ್ರೀಶೈಲಶಿಖರಂದೃಷ್ಟ್ವಾ || ಮುಕ್ತಿ ಮಾಪ್ನೋತಿ ಮಾನವಃ |" ಎಂಬಂತೆ ಶ್ರೀಶೈಲ ಶಿಖರದ ದರ್ಶನದಿಂದ ಕೇವಲ ಮುಕ್ತಿಯಾಗುವದೆಂಬದು ನಿನಗೆ ಗೊತ್ತಿಲ್ಲವೇ? ಇನ್ನಾದರೂ ಈ ನಿನ್ನ ಮೂರ್ಖತನವನ್ನು ಬಿಟ್ಟು ಯಾವ ದಾರಿಯಿಂದ ಬಂದಿರುವಿಯೋ ಅದೇ ದಾರಿಯಿಂದಲೇ ಹಿಂದಿರುಗಿ ಹೋಗಿ ಆ ಮಲ್ಲಿಕಾರ್ಜುನನನ್ನು ಏಕಮನಸ್ಸಿನಿಂದ ಧ್ಯಾನಮಾಡು. ಹಾಗಾದರೆ ನಿನ್ನ ಕಣ್ಣುಗಳು ಬರುವವು.

ಕಾಳಿದಾಸ— ಆಹಾ! ಎಂಥ ಅನ್ಯಾಯವನ್ನು ಮಾಡಿದೆನು. ಹಲವು ಶಾಸ್ತ್ರಗಳನ್ನು ಓದಿ ಸಾಕ್ಷಾತ್ ಶಂಕರನಲ್ಲಿ ದ್ವೇಷವನ್ನು ಬೆಳೆಯಿಸಿದೆನಲ್ಲ! ಗಿಳಿಯು ಓದಿ ತನ್ನ ಮಲವನ್ನು ತಾನೇ ತಿನ್ನುವಂತೆ ನನ್ನ ಕವಿತ್ವದ ಜಾಣ್ಮೆಯು ಹಾಳಾಗಿ ಹೋಯಿತು. ಆಸ್ತು. ವೆಂಕಟೇಶ್ವರನ ಆಜ್ಞೆಯಂತೆ ಶ್ರೀಶೈಲದ ಮಾರ್ಗವನ್ನೇ ಹಿಡಿದುಕೊಂಡು ಹೋಗುವೆನು.

(ಹೋಗುವನು)

(ಶ್ರೀಶೈಲಕ್ಕೆ ಬರುವನು)

ಕಾಳಿದಾಸ— ದೇವಾ ಮಲ್ಲಿಕಾರ್ಜುನಾ! ನಾನೋರ್ವ ಮದಾಂಧನು. ನನ್ನನ್ನು ಕಾಳಿದಾಸನೆಂದು ಕರೆಯುವರು. ವೆಂಕಟರಮಣನ ದರ್ಶನಕ್ಕೆ ಹೋಗುವಾಗ ನಿನ್ನ ಶಿಖರವನ್ನು ನೋಡಬಾರದೆಂದು ಮನಸ್ಸಿನಲ್ಲಿ ಕಲ್ಪಿಸಿ ನೇತ್ರಗಳನ್ನು ಮುಚ್ಚಿಕೊಂಡು ಪ್ರಯಾಣಮಾಡಿದೆನು. ಸ್ವಲ್ಪ ದೂರದಲ್ಲಿ ನಯನಗಳನ್ನು ತೆರೆಯಲು ನೇತ್ರಗಳೆರಡು ಇಂಗಿ ಏನೂ ಕಾಣದಂತಾದವು. ಜಗದೀಶ್ವರ, ನಿನ್ನ ಮಹಿಮೆಯು ಅಪಾರವಾದದ್ದು. ನಿನ್ನನ್ನು ನಿಂದಿಸಿದ ಈ ಮದಾಂಧನ ತಪ್ಪನ್ನು ಕ್ಷಮಿಸಿ ನಯನಗಳನ್ನು ದಯಪಾಲಿಸೆಂದು ಬೇಡಿಕೊಳ್ಳುವೆನು.

ಮಲ್ಲಿಕಾರ್ಜುನ— ಎಲೋ ಕಾಳಿದಾಸನೇ! ಪೂರ್ವದಲ್ಲಿ ವಿದ್ಯಾಮದದಿಂದ ನನ್ನನ್ನು ತಿರಸ್ಕರಿಸಿದ ಆ ವ್ಯಾಸನ ಗತಿಯೇನಾಯಿತೆಂಬುವದು

ನಿನ್ನ ಬುದ್ಧಿಯಲ್ಲಿರುವದಿಲ್ಲವೋ? ಅಹಂಕಾರವು ಕೇವಲ ಅನರ್ಥಕ್ಕೆ ಮೂಲವೆಂಬುವದನ್ನರಿಯದೆ ನನ್ನಲ್ಲಿ ಅಹಂಕಾರವನ್ನು ತೋರಿಸಿ ಅದರ ಫಲವನ್ನು ಚನ್ನಾಗಿ ಅನುಭವಿಸಿದಿ. ನಿನ್ನೀ ಅಪರಾಧವು ಅಕ್ಷಮ್ಯವಾಗಿದ್ದರೂ ಆ ನನ್ನ ಭಕ್ತನಾದ ವೆಂಕಟರಮಣನಾಜ್ಞೆಯಿಂದ ಶರಣಾಗತನಾಗಿ ಬಂದ ನಿನ್ನನ್ನುದ್ಧಾರ ಮಾಡುವದು ಭಕ್ತವತ್ಸಲನೆಂಬ ನನ್ನ ಪದವಿಗೆ ಭೂಷಣವಾಗಿದೆ. ಬಲಭಾಗದ ನೇತ್ರವನ್ನು ಕೊಡುವೆನು. ತೆರೆದು ನೋಡು. (ಬಲಗಣ್ಣು ಬರುವದು)

ಕಾಳಿ— ದೇವಾ ಮಲ್ಲಿಕಾರ್ಜುನ! ನಿನ್ನ ಅನುಗ್ರಹದಿಂದ ಒಂದು ನೇತ್ರವನ್ನು ಪಡೆದುಕೆಂಡೆನು. ಇನ್ನೊಂದು ನೇತ್ರವನ್ನು ದಯಪಾಲಿಸಿ ನನ್ನನ್ನುದ್ಧಾರಮಾಡು!

ಮಲ್ಲಿಕಾರ್ಜುನ— ಎಲೋ ಇನ್ನೊಂದು ನೇತ್ರವು ನಿನಗೆ ಬೇಕಾಗಿದ್ದರೆ ಸಿದ್ದಾಪುರದಲ್ಲಿ ಹೇಮರಡ್ಡಿ ಮಲ್ಲವ್ವನೆಂಬ ನನ್ನ ಭಕ್ತಳು ಅನೇಕ ಕುರುಡರಿಗೆ ಕಣ್ಣು ಕೊಡುತ್ತಿರುವಳು. ಮಲ್ಲವ್ವನ ಪಾದವನ್ನು ಧ್ಯಾನ ಮಾಡುತ್ತ ಸಿದ್ದಾಪುರಕ್ಕೆ ಹೋಗಿ ಆಕೆಯ ದರ್ಶನವನ್ನು ಮಾಡಿಕೊಂಡರೆ ನಿನಗೆ ಇನ್ನೊಂದು ನೇತ್ರವು ಬರುವದು.

(ಹೋಗುವನು)

( ಸಿದ್ದಾಪುರದ ರಸ್ತೆ. ರಂಗರಡ್ಡಿ, ರಾಮರಡ್ಡಿ ಬರುವರು. )

ಕಾಳಿ— ಆಹಾ! ಸ್ವಾಮಿಯಾದ ಮಲ್ಲಿಕಾರ್ಜುನನ ಅಪ್ಪಣೆಯಂತೆ ಇನ್ನೊಂದು ನೇತ್ರವನ್ನು ಪಡೆದುಕೊಳ್ಳಲು ಮಹನೀಯಳಾದ ಮಲ್ಲಮ್ಮನ ದರ್ಶನಕ್ಕೆ ಹೋಗುವೆನು.

(ಹೋಗುವನು)

ಕಾಳಿ— ವರ್ತಕರೇ ಈ ಗ್ರಾಮದಲ್ಲಿ ಕಣ್ಣುಕೊಡುವ ಮಲ್ಲಮ್ಮನು ಇರುವಳಂತೆ. ಆ ಮಹನೀಯಳಿರುವ ಸ್ಥಳವನ್ನು ತೋರಿಸಿ ಪುಣ್ಯವನ್ನು ಕಟ್ಟಿಕೊಳ್ಳಿರಿ.

ರಂಗ— ಎಲೋ, ಕಣ್ಣು ಕೊಡುವ ಮಲ್ಲಮ್ಮನೀಸಿದ್ದಾಪುರದಲ್ಲಿರುವಳೆ? ಇಲ್ಲಿಲ್ಲ ಹೋಗು!

ಕಾಳಿ— ಆ ಮಹನೀಯಳಿಗೆ ಹೇಮರಡ್ಡಿ ಮಲ್ಲವ್ವ ಎಂದು ಕರೆಯುವ ರಂತೆ.

ರಾಮು— ಒಹೋ ತಿಳಿಯಿತು. ಹೇಮರಡ್ಡಿ ಮಗನಾದ ಭರಮರಡ್ಡಿಯ ಹೆಂಡತಿ ಮಲ್ಲವ್ವಾ ಎಂದಿರುವಳು. ಆಕೆಯನ್ನು ಅವರ ಅತ್ತೆಯು ಮನೆ ಬಿಟ್ಟು ಹೊರಗೆ ಹಾಕಿರುವಳು ಅಂಥವಳು ನಿನಗೆ ಕಣ್ಣುಗ ಳನ್ನು ಕೊಡುವಳೆಂದು ಯಾರು ಹೇಳಿದರು. ನೀನೊಬ್ಬ ಹುಚ್ಚನಂತೆ ಕಾಣುವಿ!

ಕಾಳಿ— ಮಹಾತ್ಮರೆ, ನಾನು ಹುಚ್ಚನಲ್ಲ ಕಾಳಿದಾಸನೆಂಬ ಕವಿಯು. ಶ್ರೀ ಮಲ್ಲಿಕಾರ್ಜುನನೇ ಈ ರೀತಿಯಾಗಿ ಅಪ್ಪಣೆಯನ್ನು ಮಾಡಿರುವ ದರಿಂದ ಆ ಮಹಾತ್ಮಳನ್ನು ಹುಡುಕುತ್ತ ಬಂದೆನು.

ರಂಗ— ಇಗೋ ಅಲ್ಲಿ ಕಾಣುವದೇ ಹೇಮರಡ್ಡಿಯ ಮನೆಯು. ಅಲ್ಲಿಗೆ ಹೋಗು. ಮಲ್ಲವ್ವನ ವಿಷಯ ತಿಳಿಯುವದು.

(ಎಲ್ಲರೂ ಹೋಗುವರು)

( ಹೇಮರಡ್ಡಿ, ಭರಮರಡ್ಡಿ, ಮಲ್ಲವ್ವ ಇರುವರು ಕಾಳಿದಾಸನ ಪ್ರವೇಶ )

ಕಾಳಿ— ತಾಯಿ ಮಲ್ಲವ್ವ, ನಿನ್ನ ದರ್ಶನಕ್ಕೆ ಬಹು ದೂರದಿಂದ ಬಂದಿರು ವೆನು. ಎಲ್ಲಿರುವಿ? ತಾಯಿ, ಜಾಗ್ರತೆಯಾಗಿ ದರ್ಶನವನ್ನು ಕೊಡು.

ಮಲ್ಲಮ್ಮ— ಅಪ್ಪ ನೀನು ಯಾರು? ಯಾವ ಮಲ್ಲವ್ವನನ್ನು ಕೇಳುವಿ?

ಕಾಳಿ— ಅವ್ವಾ, ಕಣ್ಣುಗಳನ್ನು ಕೊಡುವ ಮಲ್ಲವ್ವನನ್ನು ಕೇಳುವೆನು.

ಹೇಮು— ಅಯ್ಯಾ ಕಣ್ಣುಗಳನ್ನು ಕೊಡುವ ಮಲ್ಲಮ್ಮನು ಈ ಊರಲ್ಲಿ ಇಲ್ಲೇ ಇಲ್ಲಾ.

ಕಾಳಿ— ಪುಣ್ಯಾತ್ಮನೇ ಇದು ಸಿದ್ದಾಪುರ ಗ್ರಾಮವಲ್ಲವೇ?

ಹೇಮು— ಹೌದು.

ಕಾಳಿ— ಈ ಊರಲ್ಲಿ ಹೇಮರಡ್ಡಿ ಮಲ್ಲವ್ವಾ ಎಂಬ ಶಿವಶರಣೆಯು

ಕುರುಡರಿಗೆಲ್ಲಾ ಕಣ್ಣು ಕೊಡುವಳಂತೆ. ಆ ವಾರ್ತೆಯನ್ನು ಕೇಳಿ ಬಂದಿರುವೆನು.

ಮಲ್ಲಮ್ಮ— ಅಪ್ಪಾ, ಹೇಮರಡ್ಡಿ ಮಲ್ಲವ್ವ ಎಂಬವಳು ನಾನೆ. ಆಕೆಯು ಕುರುಡರಿಗೆ ಕಣ್ಣು ಕೊಡುವಳೆಂದು ನಿನಗೆ ಯಾರು ಹೇಳಿದರು.

ಕಾಳಿ— ತಾಯಿ, ನಿನ್ನ ಪಾದಕ್ಕೆ ಪ್ರಥಮದಲ್ಲಿ ನಮಸ್ಕರಿಸಿ ಅನಂತರ ನನ್ನ ವೃತ್ತಾಂತವನ್ನು ಹೇಳುವೆನು. ನಾನು ಮಾಚೀ ಪಟ್ಟಣದ ಕಾಳಿದಾಸನೆಂಬ ವೈಶ್ಯ ಜಾತಿಯುವನಾದ ಕವಿಯು. ತಿರುಪತಿ ವೆಂಕಟರಮಣನ ದರ್ಶನಕ್ಕೆ ಹೋಗಬೇಕೆಂದು ಶ್ರೀಶೈಲದ ಪ್ರದೇಶಕ್ಕೆ ಬಂದೆನು. ಅಲ್ಲಿ ನನಗೆ ದುರ್ಬುದ್ಧಿ ಹುಟ್ಟಿ ಶ್ರೀಶೈಲದ ಶಿಖರವನ್ನು ನೋಡಬಾರದೆಂದು ಕಣ್ಣುಗಳನ್ನು ಮುಚ್ಚಿಕೊಂಡು ಮುಂದಕ್ಕೆ ಹೆಜ್ಜೆಯನ್ನಿಟ್ಟೆನು. ಆ ಕ್ಷಣವೇ ನನ್ನ ಎರಡೂ ನೇತ್ರಗಳು ಇಂಗಿ ಹೋದವು. ತಾಯಿ ಇದೇ ನನ್ನ ಸಮಾಚಾರವು.

ಮಲ್ಲಮ್ಮ— ಅಪ್ಪಾ, ನೋಡಿದರೆ ಕವೀಶ್ವರನೆಂದು ಹೇಳುವಿ. ಮಲ್ಲಿಕಾರ್ಜುನನ ಶಿಖರವನ್ನು ನೋಡಬಾರದೆಂದು ಯಾವ ಶಾಸ್ತ್ರದಲ್ಲಿ ಹೇಳಿರುವದು? ನೀನು ಓದಿರುವ ಪುರಾಣವಾದರೂ ಯಾವದು?

ಕಾಳಿ— ದೇವಿ, ಕವೀಶ್ವರನಾದರೇನು "ವಿನಾಶಕಾಲೇ ವಿಪರೀತ ಬುದ್ಧಿಃ" ಎಂಬಂತೆ ವಿವೇಕವೆಲ್ಲವು ನಾಶವಾಗಿ ನನ್ನ ಗತಿಯು ಹೀಗಾಯಿತು. ಅನಂತರ ನಿರುಪಾಯನಾದ ನಾನು ವೆಂಕಟರಮಣನನ್ನು ಧ್ಯಾನಿಸಿದೆನು. ಆತನು ಶ್ರೀಶೈಲದ ಪ್ರಭುವಾದ ಶ್ರೀ ಮಲ್ಲಿಕಾರ್ಜುನನ ಸಾನ್ನಿಧ್ಯವೇ ನಿನಗೆ ಶರಣೆಂದು ಆಜ್ಞೆಯನ್ನು ಮಾಡಿ ಕಳುಹಿದನು. ಆ ಮಲ್ಲಿಕಾರ್ಜುನನು ಒಂದು ನೇತ್ರವನ್ನು ಕೊಟ್ಟು ಇನ್ನೊಂದು ನೇತ್ರವನ್ನು ನನ್ನ ಭಕ್ತಳಾದ ಹೇಮರಡ್ಡಿ ಮಲ್ಲವ್ವನು ಕೊಡುವಳೆಂದು ಹೇಳಿ ನಿನ್ನ ಸನ್ನಿಧಿಗೆ ಕಳಿಸಿರುವನು. ತಾಯಿ, ಈ ಅಂಧಕನಿಗೆ ನೇತ್ರವನ್ನು ದಯಪಾಲಿಸಿ ಉದ್ಧಾರ ಮಾಡಬೇಕೆಂದು ಬೇಡಿಕೊಳ್ಳುವೆನು.

ಮಲ್ಲಮ್ಮ— ಅಹಾ! ನನ್ನ ತಂದೆಯಾದ ಮಲ್ಲಿಕಾರ್ಜುನನು ಎಂಥ ಹುಚ್ಚನು! ಈ ದಾಸಳನ್ನು ಪರೀಕ್ಷಿಸಬೇಕೆಂದು ಈ ಅಂಧಕನನ್ನು ನನ್ನಲ್ಲಿಗೆ ಕಳಿಸಿರುವನು. ಇದೆಲ್ಲ ಆತನ ಲೀಲೆಯಲ್ಲದೆ ಬೇರೊಂದಿಲ್ಲ! ಭವತು. ಆತನನ್ನು ಭಜಿಸುತ್ತ ಪ್ರಸಾದವನ್ನು ಹಚ್ಚುವೆನು.

( ನಂಬರ ೫೭ ) ಪದ ರಾಗ – ದೇಶಿ ತಾಲ – ಕೇರವ

ಪೊರೆಯೋ ಶ್ರೀ| ಶ್ರೀಶಗೌರೀನಾಥನೇ| ಕಾಮವೈರಿಯು ನೀ||
ಶರಜತಾತ| ಭರದಿ ತೋರೋ| ನಿನ್ನಯ| ವರಮಹಿಮೆಯ
ನೀಗ ||೧||

ಅಂಧಕನೇ, ಇಗೋ ನನ್ನ ಸ್ವಾಮಿಯ ಪ್ರಸಾದವನ್ನು ಹಚ್ಚಿರುವೆನು ಕಣ್ಣು ತೆಗೆ. ( ಕಣ್ಣು ಬರುವದು )

ಕಾಳಿ— ತಾಯಿ ಮಲ್ಲವ್ವ, ಅಂಧತ್ವವನ್ನು ಹೋಗಲಾಡಿಸಿದ ನಮ್ಮವ್ವ! ನನ್ನ ಜನ್ಮವಿರುವವರೆಗೂ ನಿನ್ನ ಧ್ಯಾನವನ್ನು ಮರೆಯಲಾರೆ. ಇನ್ನು ನನ್ನ ಗ್ರಾಮಕ್ಕೆ ಹೋಗಲು ಅಪ್ಪಣೆಯನ್ನು ಕೊಡು. ನಿನ್ನ ಧ್ಯಾನವನ್ನು ಮಾಡುತ್ತಾ ಹೋಗುವೆನು.

ಮಲ್ಲಮ್ಮ— ಕವೀಶ್ವರನೇ, ಆ ಜಗದೀಶ್ವರನಾದ ಶ್ರೀ ಮಲ್ಲಿಕಾರ್ಜುನನನ್ನು ಧ್ಯಾನಿಸುತ್ತಾ ನಿನ್ನ ಗ್ರಾಮಕ್ಕೆ ಹೋಗು.

( ನಂಬರ ೫೮ ) || ಪದ || ಪೀಲ್ ಕಮಾಜು ತಾಲ- ಪಂಜಾಬಿ

ಕಾಳಿ— || ಶ್ರೀಶೈಲ ಮಲ್ಲಿಕೇಶಾನೆ| ಪರಿಪಾಲಿಸೋ| ಈಶಾ ||ಪಲ್ಲ||
ಶೈಲಜ ನಾಥನೇ| ಭಜಿಸುವೆ ನಿನ್ನನು| ಸುಲಲಿತದಿಂದಲಿ
ವರಗಳನೀಯೈ| ಮಾರಹರ|| ಈಶಾ|| ಮಾರಹರ||
( ಹೋಗುವನು )

ಹೇಮ— ತಾಯಿ, ಆ ಶ್ರೀಶೈಲದ ಮಲ್ಲಿಕಾರ್ಜುನನು ನಿನಗೆ ದರ್ಶನವನ್ನು ಕೊಟ್ಟು ನನಗೇನು ಕಾರಣ ಕೊಡಲಿಲ್ಲ? ನಿನ್ನಿಂದ ಆ ಸ್ವಾಮಿಯ ಪಾದವನ್ನು ನೋಡಿ ಕೃತಕೃತ್ಯನಾಗಬೇಕೆಂದು ನನಗೆ ಅಪೇಕ್ಷೆಯಾಗಿರುವದು. ಆ ಮಂಗಲಮೂರ್ತಿಯಾದ ಮಲ್ಲಿಕಾರ್ಜುನನ

ದರ್ಶನವನ್ನು ಮಾಡಿಸಿ ವೃದ್ಧನಾದ ಈ ನಿನ್ನ ಮಾವನನ್ನು ಉದ್ಧಾರ ಮಾಡಬೇಕೆಂದು ಬೇಡಿಕೊಳ್ಳುವೆನು.

ಮಲ್ಲಮ್ಮ— ಮಾವನವರೇ, ನನ್ನ ಸ್ವಾಮಿಯಾದ ಶ್ರೀಮಲ್ಲಿಕಾರ್ಜುನನನ್ನು ನೋಡಬೇಕೆಂಬ ಬುದ್ಧಿಯು ನಿಮಗೆ ಉತ್ಪನ್ನವಾಗಿರುವದನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ಆತನು ಶ್ರೀಶೈಲದ ಗವಿಯಲ್ಲಿರುವನು. ಅಲ್ಲಿಗೆ ಹೋಗುವ ನಡೆಯಿರಿ. ದರ್ಶನವನ್ನು ಮಾಡಿಸುವೆನು. (ಹೋಗುವರು)

( ಶ್ರೀಶೈಲದ ಗವಿ – ಮಲ್ಲಿಕಾರ್ಜುನ )

( ನಂಬರ ೫೯ ) ಪದ ರಾಗ – ಆರಭಿ ತಾಲ – ದಾದರಾ

ಮತಿವಂತಿ। ಮಲ್ಲವ್ವ ತಾ। ಹಿತದಿ ನೋಡಲು ಬರುವಳು
ಯನ್ನನು॥ ಯನ್ನನೋಡಲ್। ತನ್ನ ಮಾವ। ನನ್ನು।
ಕರೆದು ತರುತಲಿಹಳು ॥೧॥

ಆಹಾ! ನನ್ನ ಭಕ್ತಳಾದ ಮಲ್ಲವ್ವನು ತನ್ನ ಮಾವನಾದ ಹೇಮರಡ್ಡಿಗೆ ನನ್ನ ದರ್ಶನವನ್ನು ಮಾಡಿಸುವೆನೆಂದು ಪ್ರತಿಜ್ಞೆಯನ್ನು ಮಾಡಿ ಕೆರೆದುಕೊಂಡು ಬರುತ್ತಿರುವಳು. ಏನು ಮಾಡಲಿ? ಹೇಮರಡ್ಡಿಯು ನನ್ನ ದರ್ಶನಕ್ಕೆ ಪಾತ್ರನಾಗಿರದಿದ್ದರೂ ನನ್ನ ಪರಮಭಕ್ತಳಾದ ಮಲ್ಲವ್ವನ ಅನುಗ್ರಹಕ್ಕೆ ಪಾತ್ರನಾಗಿರುವದರಿಂದ ಆ ಮಹಾತ್ಮಳ ಇಷ್ಟದಂತೆ ಹೇಮರಡ್ಡಿಗೆ ದರ್ಶನವನ್ನು ಕೊಡಲಿಕ್ಕೇಬೇಕಾಗುವದು. ಕಾರಣ ಅವರು ಬರುವದರೊಳಗಾಗಿ ಈ ಗವಿಯನ್ನು ಬಿಟ್ಟು ಅಲ್ಲಿ ಕಾಣುತ್ತಿರುವ ಹುತ್ತದಲ್ಲಿ ಅಡಗಿಕೊಳ್ಳುವೆನು.

(ಹುತ್ತದಲ್ಲಿ ಅಡಗುವನು)

( ಹೇಮರಡ್ಡಿ, ಮಲ್ಲವ್ವರ ಪ್ರವೇಶ )

ಮಲ್ಲಮ್ಮ— ಸ್ವಾಮಿ ಮಲ್ಲಿಕಾರ್ಜುನ!

ಪದ್ಯ

ಯತಿಪ ಗುರುವರ ಭೋ। ಮನಸಿಜ ಮದಹರ ಶಮನ
ಸಂಹರ ಸುಶಂಕರ॥ ಘನತರ ಭವಹರ ಮುನಿಜನವನ
ಚೈತ್ರ ಪವಿತ್ರ ದೇಹಿ ಮಲ್ಲಿನಾಥ ದರ್ಶನಂ ॥೧॥

ಜಾಗ್ರತೆಯಾಗಿ ಹೊರಗೆ ಬಾ! ನನ್ನ ಮಾವನಿಗೆ ನಿನ್ನ ದರ್ಶನವನ್ನು ಕೊಟ್ಟು ಉದ್ಧಾರಮಾಡಬೇಕೆಂದು ಬೇಡಿಕೊಳ್ಳುವೆನು.

## ಮಲ್ಲಿಕಾರ್ಜುನನ ಪದ್ಯ

ಇರಬಾರದವ್ವ ಗತಿಗೆಟ್ಟ ನಮ್ಮಂಥವರು ಜಗದಿ | ಇರಲೆಸಗೆ ಊರೊಳಗೆ ಮನೆಯಿಲ್ಲದುದಕೆ ನಾಂ ಗವಿಯೊಳಡಗಿರುವೆನವ್ವಾ || ಹಗಲಿರುಳು ಹುಲಿ ಕರಡಿಗಳು ಭಯ ಪಡಿಸುವವ್ವ ತಾಯಿ | ದೇಹವನು ಆಕ್ರಮಿಸಿ ಸರ್ಪಗಳು ವಿಷದಿಂದ ಚುಚ್ಚುತಿಹವವ್ವಾ || ತಂದೆ ತಾಯಿಗಳು ಇಲ್ಲ | ಬಂಧು ಬಳಗವು ಇಲ್ಲ | ತಣ್ಣ ತಮ್ಮಂದಿರಿಲ್ಲ | ಹಸಿದ ಹೊಟ್ಟೆಯ ನೋಡುವ ಮಲತಾಯಿಗಳು ಇಲ್ಲವಮ್ಮ ಶರಣೇ ||೧||

ಅವ್ವಾ, ನಾನು ಕೇವಲ ಲೋಕೋದ್ಧಾರಕ್ಕಾಗಿ ಬಂದು ಶ್ರೀಶೈಲ ಪ್ರದೇಶದಲ್ಲಿ ಮಲ್ಲಿಕಾರ್ಜುನನೆಂಬ ನಾಮದಿಂದ ವಾಸಮಾಡಿಕೊಂಡಿರುವೆನು. ತಾಯಿ, ನಾನು ವಾಸಮಾಡಿಕೊಂಡಿರುವ ಮಂದಿರವು ಕೇವಲ ಜೀರ್ಣವಾಗಿರುತ್ತದೆ. ಇನ್ನು ಸ್ವಲ್ಪ ದಿವಸಗಳಲ್ಲಿಯೇ ಖಂಡಿತವಾಗಿ ಬಿದ್ದು ಹೋಗುವದೆಂಬ ಭಯದಿಂದ ಈ ಗವಿಯಲ್ಲಿ ಸುಖವಾಗಿ ವಾಸಮಾಡಿಕೊಂಡಿರಬೇಕೆಂದು ಬಂದೆನು. ಆದರೆ ಇಲ್ಲಿ ಹುಲಿ-ಕರಡಿಗಳ ಬಾಧೆಯು ಹೆಚ್ಚಾಗಿರುವದು. ಹೊಟ್ಟೆಗೆ ಆಹಾರವಿಲ್ಲದ್ದಕ್ಕಾಗಿ ಕಂದ-ಮೂಲಾದಿಗಳನ್ನು ತಿಂದು ಜೀವಿಸುತ್ತಿರುವೆನು. ನೀನು ಪದೇ ಪದೇ ಬಂದು ದರ್ಶನವನ್ನು ಕೊಡೆಂದು ಕಷ್ಟ ಕೊಡಬೇಡ. ಸುಮ್ಮನೆ ಹೋಗು. ಇನ್ನುಮೇಲೆ ನಾನು ನಿನಗೆ ಖಂಡಿತವಾಗಿ ದರ್ಶನವನ್ನು ಕೊಡಲಾರೆ.

ಮಲ್ಲಮ್ಮ— ಸ್ವಾಮಿ, ನಿನ್ನ ಮಂದಿರವು ಜೀರ್ಣವಾಗಿರುವದರಿಂದ ಈ ಗವಿಯನ್ನು ಸೇರಿ ಅನೇಕ ಕಷ್ಟಗಳಿಗೆ ಗುರಿಯಾಗಬೇಕಾಯಿತೆಂಬ ಚಿಂತೆಯಿಂದ ಇನ್ನು ಮುಂದೆ ನನಗೆ ದರ್ಶನವನ್ನು ಕೊಡುವದಿಲ್ಲೆಂದು ಕಠಿಣವಾದ ಪ್ರತಿಜ್ಞೆಯನ್ನು ಮಾಡುವಿಯಾ? ದೇವಾ! ನೀನು ಮಾತ್ರ ಸರ್ವಥಾ ಚಿಂತಿಸಬೇಡ. ಜೀರ್ಣವಾದ ನಿನ್ನ ಮಂದಿರವನ್ನು

ಭದ್ರವಾಗಿ ಕಟ್ಟಿಸಿ ಲೋಕದಲ್ಲಿ ಆಚಂದ್ರಾರ್ಕವಾಗಿರುವಂತೆ ಮಾಡು ವೆನು! ಸ್ವಲ್ಪ ದಿವಸಗಳಲ್ಲಿಯೇ ಈ ಕಾರ್ಯವಾಗುವದೆಂದು ತಿಳಿ. ನಡೆ, ನಿನ್ನ ಆಲಯದಲ್ಲಿ ಸುಖವಾಗಿರು.

( ನಂಬರ ೬೦ ) ಪದ ರಾಗ – ಬಿಹಾಗು ತಾಲ – ಆದಿ

ಮಲ್ಲಿಕಾರ್ಜುನ— ಕನಿಕರವು ಬಂದಿತೆ ತಾಯಿ || ಗಿರಿಯೊಳಗಿರುವನು | ಮರುಳ ಶಂಕರನೆಂದು | ಹರುಷದಿ ಗುಡಿ ಗೋಪುರ ರಚಿ ಸುವಿಯಾ ||೧||

ಅಮ್ಮಾ, ನೀನೋರ್ವಳೆ ಮಹತ್ತರವಾದೀಮಂದಿರದ ಜೀರ್ಣೋದ್ಧಾರ ಕಾರ್ಯವನ್ನು ಹೇಗೆ ಮಾಡುವಿ? ತಾಯಿ, ಈ ನಿನ್ನ ಮಾತನ್ನು ನಾನು ಹೇಗೆ ನಂಬಲಿ?

ಮಲ್ಲಮ್ಮ— ಸ್ವಾಮಿ, ಈ ನನ್ನ ಮಾವನೂ ನಾನೂ ನಿನ್ನ ಸೇವೆಯನ್ನು ಮಾಡಲು ಸಿದ್ಧರಾಗಿರುವೆವು. ನನ್ನ ಮಾವನಿಂದ ವಚನವನ್ನು ಕೊಡಿಸಿದರೆ ನಂಬುವಿಯಾ? ಅಸ್ತು. ಮಾವನವರೇ, ಗುಡಿಯ ಜೀರ್ಣೋದ್ಧಾರವನ್ನು ಮಾಡುವೆವೆಂದು ಪರಮಾತ್ಮನ ಪಾದಕ್ಕೆ ನಮಸ್ಕಾರವನ್ನು ಮಾಡಿರಿ.

ಹೇಮ— ದೇವಾ, ನನ್ನ ಸೊಸೆಯಾದ ಮಲ್ಲಾಂಬೆಯಿಂದ ನಿನ್ನ ದರ್ಶನವಾಯಿತು. ಆಕೆಯ ವಚನದಂತೆ ನಿನ್ನ ಗುಡಿಯ ಜೀರ್ಣೋ ದ್ಧಾರವನ್ನು ಮಾಡಿ ಸುವರ್ಣದ ಮೆಟ್ಟಲುಗಳನ್ನು ಮಾಡಿಸಿ ಇದೇ ಮಾಘ ಬಹುಳ ೩೦ ಶಿವರಾತ್ರಿಗೆ ನಿನ್ನ ರಥೋತ್ಸವವನ್ನು ಮಾಡಿಸು ವೆವು. ಈ ಸ್ಥಳವನ್ನು ಬಿಟ್ಟು ಎಲ್ಲಿಯೂ ಹೋಗಬಾರದೆಂದು ಬೇಡಿಕೊಳ್ಳುವೆನು.

ಮಲ್ಲಿಕಾರ್ಜುನ— ಹೇಮರಡ್ಡಿ, ನನ್ನ ಭಕ್ತಳಾದ ಮಲ್ಲಮ್ಮನ ಅನು ಗ್ರಹದಿಂದ, ನಿನ್ನ ಜನ್ಮವಿಂದಿಗೆ ಪವಿತ್ರವಾಯಿತು! ಇಂದಿನಿಂದ ನೀನು ಮಲ್ಲಮ್ಮನನ್ನು ಸೊಸೆಯೆಂದು ಭಾವಿಸದೆ ಸಾಕ್ಷಾತ್ ಶಕ್ತಿಯ ಅವತಾರವೆಂದು ಭಾವಿಸು! ಇದರಿಂದ ನಿನಗೆ ಕಲ್ಯಾಣವಾಗುವದು. ಅಸ್ತು. ಶಿವರಾತ್ರಿಗೆ ನನ್ನ ಉತ್ಸವವನ್ನು ನಡೆಯಿಸುವೆವೆಂದು ಹೇಳು ವಿರಲ್ಲಾ; ಆ ವರೆಗೂ ಈ ಸ್ಥಳವನ್ನು ಬಿಟ್ಟು ಎಲ್ಲಿಯೂ ಹೋಗುವದಿಲ್ಲ.



ಭರಮರಡ್ಡಿಗೆ ಜ್ಞಾನೋದಯವಾಗಿ ಮಲ್ಲಿಕಾರ್ಜುನನ
ಸ್ತೋತ್ರ ಮಾಡುವನು.

ಮಲ್ಲಮ್ಮ— ದೇವಾ, ನನ್ನದಿನ್ನೊಂದು ವಿಜ್ಞಾಪನೆಯಿರುವದು.

ಮಲ್ಲಿಕಾರ್ಜುನ— ತಾಯಿ ಅದೇನು?

ಮಲ್ಲಮ್ಮ— ಸ್ವಾಮಿ, ಅಲ್ಲಿ ನಿಂತಿರುವವರೇ ನನ್ನ ಪತಿದೇವರು. ಅವರಿಗೆ ಸ್ವಲ್ಪ ಹುಚ್ಚು ಇರುವದು. ಜ್ಞಾನಬರುವಂತೆ ಆಶೀರ್ವದಿಸ ಬೇಕೆಂದು ಬೇಡಿಕೊಳ್ಳುವೆನು.

ಮಲ್ಲಿಕಾ— ಅಮ್ಮಾ ನಿನ್ನ ಋಣವನ್ನು ತೀರಿಸತಕ್ಕ ಸಕಾಲವೇ ಪ್ರಾಪ್ತ ವಾಯಿತು, ಇಗೋ ನಿನ್ನ ಗಂಡನಿಗೆ ಆಶೀರ್ವಾದವನ್ನು ಮಾಡು ವೆನು....ನೋಡು ಮಗು ಭರಮರಡ್ಡಿ ಇಲ್ಲಿ ಬಾ! ನಿನ್ನ ಸುದೈವವನ್ನು ಎಷ್ಟು ಕೊಂಡಾಡಿದರೂ ಸಾಲದಾಗಿರುವದು. ನನ್ನ ಭಕ್ತಳಾದ ಮಲ್ಲವ್ವನಿಗೆ ನೀನು ಗಂಡನಾಗಿರುವದರಿಂದ ನನ್ನ ದರ್ಶನಾಶೀರ್ವಾದ ಗಳಿಗೆ ಪಾತ್ರನಾದಿ. ಇಲ್ಲಿ ಬಾ. ಆಶೀರ್ವಾದ ಮಾಡುವೆನು. ಎಂದು ಆಶೀರ್ವಾದ ಮಾಡುವನು. ಭರಮರಡ್ಡಿಗೆ ಜ್ಞಾನ ಬಂದು ಮಲ್ಲಿಕಾ ರ್ಜುನನನ್ನು ಸ್ತುತಿಸುವನು:

(ನಂ. ೬೧) ಪದ ರಾಗ-ತಿಲಂಗ ತ್ರಿತಾಲ

ಸುಜನಪಾರ | ಕುಜನ ಹರ | ಪರತರ | ವಿರತಿಮಾರ್ಗ<br>ಧರ | ಶರಣ ವಿಪಾರ | ದುರಿತ ಸಂಹರ | ವರಚರಿತನಿ<br>ಕರ ||ಪಲ್ಲ|| ಪಾವನ ಜನುಮನೋ ಭಾವನವಶಘನ<br>ಜ್ಞಾನಕರಣನವೋ ದೀನ ಸುರತರುವಾರ ||೧||

ದೇವಾ! ನಿನ್ನ ಆಶೀರ್ವಾದದಿಂದ ನನ್ನ ಅಜ್ಞಾನವೆಲ್ಲ ಹೋಗಿ ಜ್ಞಾನೋದಯವಾಗಿ ಧನ್ಯನಾದೆ!

ಮಲ್ಲಿಕಾ— ಮಗು, ಇದಕ್ಕೆ ಸಾಕ್ಷೀಭೂತರು ಯಾರೆಂದು ತಿಳಿದು ಕೊಂಡಿರುವಿ? ಈ ನಿನ್ನ ಪತಿಯಾದ ಮಲ್ಲಾಂಬೆಯೇ ತಿಳಿಯಿತೋ! ಹೇಮರಡ್ಡಿ, ಗುಡಿಯ ಜೀರ್ಣೋದ್ಧಾರ ಮಾಡುವ ಕಾರ್ಯಕ್ಕೆ ಸರ್ವರೂ ಹೋಗಿರಿ. (ಹೋಗುವರು)

(ವನವಿನ ಹಟ್ಟಿ. ಹೇಮರಡ್ಡಿ, ಮಲ್ಲವ್ವ ಇರುವರು)

ಹೇಮ — ತಾಯಿ ಮಲ್ಲವ್ವ, ಗುಡಿಯ ಜೀರ್ಣೋದ್ಧಾರ ಮಾಡುವೆ

ಯಾವ ಪದವಿಯನ್ನು ಅಪೇಕ್ಷೆ ಮಾಡಿದರೂ ಕೊಡುವೆನು. ಕಾರಣ ನಿನ್ನ ಅಪೇಕ್ಷೆ ಏನು ಹೇಳು?

ಮಲ್ಲಮ್ಮ— ದೇವಾ, ನಾನು ನಿನ್ನ ಪಾದಸೇವೆಯಲ್ಲದೆ ಮತ್ತಾವುದನ್ನೂ ಅಪೇಕ್ಷೆ ಮಾಡತಕ್ಕವಳಲ್ಲ; ಆದರೆ ನನ್ನ ರಡ್ಡಿ ಕುಲದವರಿಗೆ ಮಾತ್ರ ಯಾವಕಾಲದಲ್ಲಿಯೂ ಬಡತನ ಬಾರದಂತೆ ಅನುಗ್ರಹಿಸಬೇಕೆಂದು ಬೇಡಿಕೊಳ್ಳುವೆನು.

ಮಲ್ಲಿಕಾರ್ಜುನ— ಅಮ್ಮಾ ನಿನ್ನ ಚರಿತ್ರವು ಅಗಾಧವಾಗಿರುವದು. ಇದೋ ನಿನ್ನ ಇಷ್ಟದಂತೆ ನಿನ್ನ ರಡ್ಡಿ ಕುಲದವರು ತಮ್ಮ ಮನೆಯಲ್ಲಿ ನಿನ್ನ ಪೂಜೆಯನ್ನು ಮಾಡುತ್ತಾ ಮಲ್ಲಿಕಾರ್ಜುನಾ ಎಂದು ನನ್ನ ಧ್ಯಾನವನ್ನು ಮಾಡುತ್ತಾ, ಕೋಟಿ ಉದ್ಯೋಗದಲ್ಲಿ ಮೇಟಿ ಉದ್ಯೋಗವೇ ಅಧಿಕವೆಂಬಂತೆ ವ್ಯವಸಾಯ ಕೆಲಸವನ್ನು ಮಾಡಿಕೊಂಡಿರುವರೋ ಅವರಿಗೆ ಮಾತ್ರ ಯಾವ ಕಾಲದಲ್ಲಿಯೂ ಬಡತನ ಬಾರದು! ಇದೇ ನನ್ನ ಆಶೀರ್ವಾದವು. ಇನ್ನು ನಾನು ಈ ಲಿಂಗದಲ್ಲಿ ಐಕ್ಯನಾಗುವೆನು. ನೀವು ಸುಖವಾಗಿರ್ರಿ. (ಲಿಂಗದಲ್ಲಿ ಐಕ್ಯನಾಗುವನು)

ಸರ್ವರೂ ಮಂಗಲವನ್ನು ಪಾಡುವರು.



ಸಮಾಪ್ತ.

